ಮಿಂಚಿನಬಳ್ಳಿಯ ೧೧ನೆಯ ವರ್ಷದ ೩ನೆಯ ಕುಡಿ

# ಸಮಾಜ ದರ್ಶನ

ಲೇಖಕರು:

ಶ್ರೀಮಾನ್ ಶಂ. ಬಾ. ಜೋಶಿ

卐

ಚಾಲುಕ್ಯ ವಿಕ್ರಮ ವರುಷ ೧೮೭೩



೩ನೆಯ ಮೇ ೧೯೪೯

ಬೆಲೆ ೧-೮-೦

ಮಿಂಚಿನಬಳ್ಳಿಯ ೧೧ನೆಯ ವರುಷದ ನಾಲ್ಕನೆಯ ಕುಡಿ

ಆಗಸ್ಟ ತಿಂಗಳಿನಲ್ಲಿ

ಪ್ರಕಟವಾಗುವದು.


ಪ್ರಕಾಶಕರು:

ಬಿ. ಜಿ. ಅವಧಾನಿ,

ಮಿಂಚಿನಬಳ್ಳಿ, ಧಾರವಾಡ


*


ಮುದ್ರಕರು:

ಎಸ್. ಎಸ್. ಬೆಂಗೇರಿ,

ವಿಜಯ ಮುದ್ರಣಾಲಯ,

ಧಾರವಾಡ

# ಓದುಗರಲ್ಲಿ ಬಿನ್ನಹ



ಎಪ್ರಿಲ ತಿಂಗಳಲ್ಲಿಯೇ ಪ್ರಕಟವಾಗಬೇಕಾಗಿದ್ದ ಪುಸ್ತಕವು ಈಗ ಪ್ರಕಟವಾಗುತ್ತಲಿದೆ. ಪರಿಸ್ಥಿತಿಯ ಪರಿಣಾಮವು ಎಲ್ಲ ಕಾರ್ಯಗಳ ಮೇಲೆ ಆಗುತ್ತಿದೆ ಅಪರಿಹಾರ್ಯ ಕಾರಣಗಳ ಮೂಲಕ ಆಗುವ ಕಾರ್ಯಗಳು ಹೊತ್ತಿಗೆ ಆಗದಿರುವದು ಇಂದಿನ ಜೀವನವಾಗಿದೆ. ಈ ವಿಷಮ ಪರಿಸ್ಥಿತಿಯೇ ಪುಸ್ತಕ ವಿಲಂಬಕ್ಕೆ ಕಾರಣವಾಗಿ ವಾಚಕರಿಗೆ ತೊಂದರೆಯಾದುದಕ್ಕಾಗಿ ಕ್ಷಮೆಯನ್ನು ಯಾಚಿಸುತ್ತೇನೆ.

'ಸಮಾಜ ದರ್ಶನ'ವೆಂಬ ಪುಸ್ತಕವು ಈಗ ಪ್ರಕಟವಾಗುತ್ತಲಿದೆ. ಇದನ್ನು ಬರೆದವರು ಗೆಳೆಯರಾದ ಶ್ರೀಮಾನ್ ಶಂ ಬಾ. ಜೋಶಿಯವರು ಶಂ ಬಾ. ಜೋಶಿಯವರು ಲೇಖಕ ವರ್ಗದಲ್ಲಿ ಈಗಾಗಲೇ ಹೆಸರುಗಳಿಸಿದ್ದಾರೆ. ಅವರು ಸಾಂಪ್ರದಾಯ ಶರಣರಲ್ಲ; ಸ್ವತಂತ್ರ ವಿಚಾರಿಗಳು; ಅಭ್ಯಾಸಿಗಳು; ಸಮಾಜ ಸುಧಾರಕರು. ಸಮಾಜವು ಜಾಡ್ಯವನ್ನು ತೊರೆದು ವಿಚಾರಪರವಾಗಿ ಮುಂದರಿಯಬೇಕೆಂಬುದೇ ಅವರ ಹೆಬ್ಬಯಕೆ ಅವರ ಎಲ್ಲ ಬರಹಗಳಲ್ಲಿ ಈ ಬಯಕೆಯು ಒಡಮೂಡಿದುದನ್ನು ವಾಚಕರು ಈಗಾಗಲೇ ಬಲ್ಲರು ಈ ದೃಷ್ಟಿಯಿಂದ ಪುಸ್ತಕದ ಮಹತ್ವವು ಹೆಚ್ಚಾಗಿದೆ. ಇದರಲ್ಲಿ ವಿವೇಚಿಸಿದ ಎಲ್ಲ ಸಿದ್ಧಾಂತಗಳು ವಾಚಕರಿಗೆ ಮಾನ್ಯವಾಗಬೇಕೆಂದಿಲ್ಲ. ಎಲ್ಲ ಬಗೆಯ ವಿಚಾರಗಳಿಗೆ ಇಂಬುಗೊಟ್ಟು ವಾಚಕರಿಗೆ ಸತ್ಯವನ್ನು ಹಲವು ಬಗೆಯಿಂದ ತಿಳಿದುಕೊಳ್ಳಲು ಅವಕಾಶವನ್ನು ಕಲ್ಪಿಸುವದೇ ಈ ಹತ್ತು ವರ್ಷಗಳಲ್ಲಿ ಮಿಂಚಿನಬಳ್ಳಿಯ ಧೋರಣವಾಗಿದೆ. ಈ ಪುಸ್ತಕವು ಅಂತಹದೊಂದು ಮಾದರಿ.

ಈ ಪುಸ್ತಕವನ್ನು ವಾಚಕರು ಓದಿ, ಸಮಾಜದ ಬಗೆಗೆ ವಿಚಾರ ಪರರಾದರೆ ಸಾರ್ಥಕವಾಯಿತೆಂದು ನಾನು ಬಗೆಯುತ್ತೇನೆ. ಭಾರತದ ಪುನರ್ನಿರ್ಮಾಣದ ಈ ಕಾಲದಲ್ಲಿ ಎಲ್ಲ ವಿಚಾರ ಪ್ರವಾಹಗಳನ್ನರಿತು ಯಾವ ಸ್ಥಿರ ಹಾಗೂ ಸತ್ಯ ಸಿದ್ಧಾಂತಗಳ ಮೇಲೆ ಸಮಾಜ ರಚನೆಯನು ಮಾಡಬೇಕೆಂಬುದೇ ಇಂದಿನ ನಮ್ಮ ಸಮಸ್ಯೆಯಾಗಿದೆ. ಸನಾತನಿಗಳ ದೈವೀ ದೃಷ್ಟಿಯೂ ಆಧುನಿಕರ ಭೌತಿಕ ದೃಷ್ಟಿಯೂ ಸಮ್ಮಿಲಿತವಾಗುವಂತೆ ಮುಂದಿನ ನಮ್ಮ ಜೀವನವನ್ನು ರೂಪಗೊಳಿಸುವ ಹವಣಿಕೆಯಲ್ಲಿ ಭಾರತೀಯರ ಅಂತಃಕರಣಗಳು ಇಂದು ಆತುರಗೊಂಡಿವೆ. ಇಂತಹ ಸಮಯದಲ್ಲಿ ಸಮಾಜ ದರ್ಶನವು ಪ್ರಕಟವಾಗುತ್ತಲಿದೆ ಈ ಬರೆಹವು ಕನ್ನಡ ಜನಾಂಗಕ್ಕೆ ವಿಚಾರಪರವಾಗಲು ಒಂದು ಸಾಧನವಾಗುವದೆಂದು ನಾನು ಬಗೆಯುತ್ತೇನೆ.

ಈ ವಿಷಯವಾಗಿ ಲೇಖಕರ ವಿಚಾರಗಳು ಈ ಪುಸ್ತಕದಲ್ಲಿ ಪೂರ್ಣ ಪ್ರಕಟವಾಗಿಲ್ಲ. ಇನ್ನೊಂದು ಭಾಗದಲ್ಲಿ ಇದರ ಪೂರ್ಣತೆಯಾಗುವದಿದೆ. ಸಂಕಲ್ಪಕ್ಕಿಂತಲೂ ಗ್ರಂಥವು ಹೆಚ್ಚು ಬೆಳೆದುದರಿಂದ ಅದರಲ್ಲಿ ಎರಡು ಭಾಗಗಳನ್ನು ಮಾಡಲಾಗಿದೆ. ಪೂರ್ಣ ವಿವೇಚನೆಯನ್ನು ಓದದೆ ಸಿದ್ಧಾಂತದ ಬಗೆಗೆ ನಿಶ್ಚಿತ ಅಭಿಪ್ರಾಯವನ್ನು ಮಾಡಿಕೊಳ್ಳುವದು ಯೋಗ್ಯವಾಗಲಿಕ್ಕಿಲ್ಲ.

ಶ್ರೀಮಾನ್ ಶಂ. ಬಾ ಜೋಶಿಯವರು ತಮ್ಮ ಅಭ್ಯಾಸದ ಅನುಭವದ ಲಾಭವನ್ನು ಗ್ರಂಥರೂಪವಾಗಿ ನಿಂಚಿನಬಳ್ಳಿಗೆ ಒದಗಿಸಿಕೊಟ್ಟುದಕ್ಕಾಗಿ ನಾವು ತುಂಬ ಆಭಾರಿಯಾಗಿದ್ದೇವೆ.

ಧಾರವಾಡ
೩೦ನೆಯ ಮೇ ೧೯೪೯

ತಮ್ಮ
ಬುರ್ಲಿ ಬಿಂದುಮಾಧವ

# ಅರಿಕೆ

ಓದಿ ಅರಿತುಕೊಂಡುದನ್ನೂ ಜೀವನದಲ್ಲಿ ಕಂಡುಕೊಂಡುದನ್ನೂ ಸಂಗ್ರಹಿಸಿ ಕೆಲವಂಶವನ್ನು ಇಲ್ಲಿ ವಿವರಿಸುವ ಪ್ರಯತ್ನ ಮಾಡಲಾಗಿದೆ.

ಪ್ರತಿದಿನದ ಮಾತು ಕಥೆಯಲ್ಲಿ 'ಸಮಾಜ'ದ ಹೆಸರು ಕಿವಿಗೆ ಬೀಳದ ಸುಶಿಕ್ಷಿತರೇ ದೊರೆಯಲಾರರು ಸ್ವಾತಂತ್ರ್ಯ, ಪ್ರಜಾಪ್ರಭುತ್ವದ ಆಂದೋಲನದ ಈ ದಿನಗಳಲ್ಲಿ ಸಮಾಜವನ್ನು ಕುರಿತು ಆಸ್ಥೆಯುಂಟಾಗದ ಮಾನವರು ವಿರಳ. ಆದರೆ-ಎದ್ದರೆ, ಕುಳಿತರೆ, ಸಮಾಜ, ಸಮಾಜವೆಂದು ಮಾತನಾಡುತ್ತಿದ್ದರೂ ಸಮಾಜ ಎಂದರೇನು ? ಎಂದು ಪ್ರಶ್ನೆ ಕೇಳಿದರೆ ದಿಗಿಲೇ ! ನನಗಿದ್ದ ಈ ದಿಗಿಲನ್ನು ಕಡಿಮೆ ಮಾಡಿಕೊಳ್ಳುವ ಪ್ರಯತ್ನದಲ್ಲಿ ಸಂಪಾದಿಸಿದುದನ್ನು ಇನ್ನುಳಿದವರಿಗೂ ಅದರ ಉಪಯೋಗವು ಆಗುತ್ತಿದ್ದರೆ ಆಗಲಿ, ಎಂಬ ಭಾವನೆಯಿಂದಲೂ ಇದರಲ್ಲಿ ಸಿದ್ಧರೂ ತಜ್ಞರೂ ಆದವರಿಂದ ಹೆಚ್ಚಿನ ವಿಚಾರ, ವಿಮರ್ಶೆಗಳಿಗೆ ಆರಂಭವಾಗಿ ನನಗೂ ಅವರಿಂದ ನೆರವು ದೊರೆಕೀತೆಂದೂ ಇದನ್ನು ಬರೆಯಲು ಮನಸು ಮಾಡಿದ್ದಾಗಿದೆ

ಮೊದಲನೆಯ ಅಧ್ಯಾಯವು ಬರಿಯ ಪೀಠಿಕೆಯಾಯ್ತು. ಎರಡನೆಯದರಲ್ಲಿ ಸುಮ್ಮನೆ ನಾಲ್ಕು ಮಾತು ಎತ್ತಿ, ಮೂರನೆಯ ಅಧ್ಯಾಯದಿಂದ ವಿವೇಚನೆಗೆ ಆರಂಭವಾಗುವದು. ನಾಲ್ಕನೆಯದರಲ್ಲಿ ವ್ಯಕ್ತಿ ಮತ್ತು ಸಮಾಜದ ಸಂಬಂಧಗಳ ವಿವರಣೆಯಾಗುವದರಲ್ಲಿಯೆ ಪುಸ್ತಕದ ಪರಿಮಿತಿ ಮುಗಿದುದಕ್ಕಾಗಿ ನಿಲ್ಲಿಸಬೇಕಾಯ್ತು- ಸಂಸ್ಥೆ, ಸಮಿತಿ, ಮತ್ತು ಸಂಘಗಳನ್ನು ಕುರಿತ ಮಹತ್ತ್ವದ ಚರ್ಚೆಯನ್ನೂ ಸಮಾಜದ ಇನ್ನುಳಿದ ಹಲವು ಅಂಶಗಳ ವಿವರಣೆಯನ್ನೂ ಮುಂದಿನ ಪ್ರಕಟನೆಯಲ್ಲಿ ಓದಿಕೊಳ್ಳಬೇಕಾಗಿ ಬಿನ್ನಹ.

ಅಚ್ಚಿನಲ್ಲಿರುವಾಗ ಇದನ್ನೋದಿ ಉಪಯುಕ್ತ ಸೂಚನೆಗಳನ್ನು ಕೊಟ್ಟ ಶ್ರೀಗಳಾದ ಹೋಳಿಕಟ್ಟಿ, ಚುಳಕಿ, ಆರ್. ವಿ. ಕುಲಕರ್ಣಿ, ಮುದಗಲ್ಲ ಮೊದಲಾದ ಮಿತ್ರರಿಗೆ ಅಭಿವಂದನೆ ಕೆಲವರು ಬಹಳ ಸಂಕ್ಷಿಪ್ತವಾಯಿತೆಂದು ತಿಳಿಸಿದರು. ಆದರೆ ವಿಸ್ತಾರವಾಗಿ ಬರೆದ ಹಿರಿಯ ಹೊತ್ತಗೆಗಳ ಬೆಲೆ ಸಾಮಾನ್ಯರಿಗೆ ನಿಲುಕದ್ದಾಗುವದು. ಅಲ್ಲದೆ ಸಂಕ್ಷೇಪವೆಂದರೂ ಅರ್ಥಕ್ಕೆ ನಿಲ್ಲಿಸಬೇಕಾಗುತ್ತದೆ. ಕಾಲೇಜಿನ ತರುಣ

ಮಿತ್ರರೊಬ್ಬರು ಇದರಲ್ಲಿಯ ಪುರಾಣಗಳ ದೃಷ್ಟಾಂತಗಳನ್ನು ಕುರಿತು ಆಕ್ಷೇಪಿಸಿ, ಕೇವಲ ಆಧುನಿಕವಾಗಿಯೆ ಏಕೆ ಬರೆಯುವದಿಲ್ಲವೆಂದು ಪ್ರಶ್ನಿಸಿದರು. ಇನ್ನೊಬ್ಬ ಹಳೆಯ ಮಿತ್ರರು ಭಾರತೀಯ ದೃಷ್ಟಿಯೇ ಇದರಲ್ಲಿ ಇಲ್ಲವೆಂದು ಹೇಳಿದರು. ಸತ್ಯಕ್ಕೆ ಬೆಲೆಯನ್ನು ಕೊಟ್ಟವನು ಯಾವುದೊಂದೇ ಪಕ್ಷ ವಹಿಸಿ ಬರೆಯುವದಕ್ಕೆ ಅಸಮರ್ಥನಾಗುತ್ತಾನೆ ಈ ಕಾರಣದಿಂದ ನವಮತವಾದಿಗಳಿಗೆ ಹಾಗೂ ಸನಾತನಾಭಿಮಾನಿಗಳಿಗೆ ಇಬ್ಬರಿಗೂ ನನ್ನ ಬರೆವಣಿಗೆಯಿಂದ ತೃಪ್ತಿಯುಂಟಾಗದಿರುವುದು ಸ್ವಾಭಾವಿಕವಾಗಿದೆ.

ಇದನ್ನು ಬರೆವಾಗ ಕಣ್ಣೆದುರು ಇರಿಸಿಕೊಂಡ ವಾಚಕ ವರ್ಗಕ್ಕೆ ಬೇಸರವಾಗಬಾರದೆಂದು, ಶಾಸ್ತ್ರೀಯ ಗಂಭೀರ ಚರ್ಚೆಯನ್ನು ಶಕ್ಯವಿದ್ದಷ್ಟು ಸುಲಭಮಾಡಲು ಪ್ರಯತ್ನಪಟ್ಟಿದೆ. ಆದರೆ ಬರಿ ಹರಟೆಯೆ ಆಗದಂತೆ ಮಿಶ್ರ ಪದ್ಧತಿಯನ್ನು ಉಪಯೋಗಿಸಿ ವಿಷಯವನ್ನು ವಿವರಿಸಲಾಗಿದೆ

— ಲೇಖಕ

# ವಿಷಯಾನುಕ್ರಮಣಿಕೆ



# ಒಪ್ಪೋಲೆ

೦

| ಪುಟ—ಸಾಲು | | ತಪ್ಪು | ಒಪ್ಪು |
|---|---|---|---|
| ೪೮ | ೨ | ಲೋಕ....ಸಂಬಂಧ | ಲೋಕ....ಸಂಭವ |
| ೫೨ | ೧೯ | ಗಂಡಾಂತರಗಳನ್ನು | ಗಂಡಾಂತರಗಳನ್ನು ಲೆಕ್ಕದಿಂದ ಮುಂಗಂಡು ಹೇಳುತ್ತಿದ್ದಾರೆ. |
| ೫೫ | ೧೪ | ಪ್ರಚಾರ | ವಿಚಾರ |
| ೫೯ | ೧೫ | ಮಾನವರಿಗೆ | ವಾನರರಿಗೆ |
| ೭೪ | ೨೪ | barnaches | barnacles |
| ೭೬ | ೪ | ಸಾವಿರ ವರ್ಷಗಳ | ನೂರು ವರ್ಷಗಳ |
| ೭೬ | ೪ | ನೂರು ವರ್ಷ | ಒಂದು ಕ್ಷಣವೂ |
| ೭೭ | ೮ | ವೈಯುಕ್ತಿಕ | ವೈಯಕ್ತಿಕ |
| ೭೯ | ೨೨ | ನಾಯ್ಗುಗಳ | ನಾಯ್ಗುಳ |
| ೮೯ | ೨ | ಆತೀತರಾಳ | ಆಂತರಾಳ |

# ಸಮಾಜದರ್ಶನ

—: ❀ :—

## ೧

## "ಸಮಾಜ" ಎಂಬುದು ಉಂಟೆ ?

ಸಮಾಜ, ಸಮಾಜ ಎಂಬ ಮಾತು ಅಡಿಗಡಿಗೆ ಕೇಳಬರುತ್ತದೆ. ಆದರೆ, ಸಮಾಜವೆಂಬುದು ಎಲ್ಲಿದೆ ? ಸಮಾಜವೆಂಬುದು ಉಂಟೆ ? ಎಲ್ಲಿ ನೋಡಿದರಲ್ಲಿ ವ್ಯಕ್ತಿಗಳು ಇರುವರೇ ಹೊರತು ಸಮಾಜವೆಂಬುದು ಕಾಣ ದೊರೆಯದು.

ಯಾವುದೇ ಬಗೆಯ ಕೆಲಸವನ್ನಾಗಲಿ, ಈಗ ಸಮಾಜದ ಹೆಸರಿನಲ್ಲಿ ಆರಂಭಿಸುವುದು ಒಂದು ಫ್ಯಾಶನ್ ಆಗಿದೆ; ಗೌರವದ್ದೆಂದು ಎಣಿಸಲ್ಪಡುತ್ತಿದೆ ಸ್ವಲ್ಪ ಒಳಹೊಕ್ಕು ನಿಟ್ಟಿಸಿದರೆ ಇದೆಲ್ಲವೂ ಮಂಕುಯೆಂದೇ ಕಂಡುಬಾರದೆ ಇರದು. ಸಮಾಜಸೇವೆ, ದೇಶಸೇವೆ, ಸಾರ್ವಜನಿಕಕಾರ್ಯ ಎಂಬೀ ಬಗೆಯಾಗಿ ಮಾತನಾಡುವವರಲ್ಲಿ ಎರಡು ವರ್ಗಗಳಿವೆ : ಕೆಲವರು ಆತ್ಮವಂಚಕರು; ಹಲವರು ಪರವಂಚಕರು. ಮೊದಲನೆಯ ಬಗೆಯವರು ಪ್ರಾಮಾಣಿಕರು; ಪ್ರಾಮಾಣಿಕತೆಯ ಉಬ್ಬಿನಲ್ಲಿ ಹಾನಿಗೆ ಈಡಾದರೂ ಗಮನಿಸದೆ ತಮಗೆ ತಾವೇ ಮಂಕುಹಿಡಿಸಿಕೊಂಡವರು. ಎರಡನೆಯ ಬಗೆಯವರು ತಮ್ಮ ಸ್ವಾರ್ಥ-ಪ್ರತಿಷ್ಠೆಗಳನ್ನು ಬೆಳಸಿಕೊಳ್ಳಲು ಸಮಾಜ ಸೇವೆ, ಪರೋಪಕಾರಾದಿ ಬಣ್ಣದ ಮಾತುಗಳನ್ನಾಡಿ ಜನರನ್ನು ಮರುಳು ಗೊಳಿಸಿ, ಕೊನೆಯ ವರೆಗೆ ಅವರು ತಮ್ಮ ಅನುಯಾಯಿಗಳಾಗಿರುವಂತೆ ಹೆರವರಿಗೇ ಮಂಕುಹಿಡಿಸುವವರು. ಮೊದಲನೆಯವರು, ತ್ಯಾಗ ಸೇವೆಯ ಹೆಸರಿನಲ್ಲಿ ತಾವೇ ಆಜನ್ಮ ಸುಟ್ಟುಸುಣ್ಣವಾಗಿ ತಮ್ಮ ಮನೆಮಾರು ಹಾಳು ಮಾಡಿಕೊಂಡು ಇನ್ನೊಬ್ಬರ ಮನೆ ಬೆಳಗ ಹೊರಟವರು. ಎರಡನೆಯವರು, ಜನರಿಗೆ ತ್ಯಾಗಮಾಡಹೇಳಿ ಅದರ

ಫಲವನ್ನು ತಾವು ಪಡೆಯುತ್ತಾರೆ. ಸತ್ಯಭಾಮೆಯ ಹಿತ್ತಿಲಲ್ಲಿ ಪಾರಿಜಾತದ ಗಿಡ; ರುಕ್ಮಿಣಿಯ ಹಿತ್ತಿಲಲ್ಲಿ ಅದರ ಹೂವು. ನೀರು ಹಾಕುವವಳು ಅವಳು; ನರುಗಂಪ ಸೊಗಸು ರುಕ್ಮಿಣಿಗೆ ! ಸೇವೆಯಿಂದ ಜೀವನವು ಪವಿತ್ರವಾಗುವು ದೆಂದು ಉಪದೇಶಿಸಿ ತಾವು ಹೂಡಿದ ಕೆಲಸದಲ್ಲಿ ಅಥವಾ ಸಂಸ್ಥೆಯಲ್ಲಿ ಇಲ್ಲವೆ ಆಶ್ರಮ-ಮಠದಲ್ಲಿ ಅಂತಹ ಸೇವಾಕಾರ್ಯಕ್ಕೆ ಆ ಜನಗಳಿಗೆ ಅವಕಾಶವನ್ನು ಕಲ್ಪಿಸಿಕೊಟ್ಟು ಅವರ ಮೇಲೆ ಮಹೋಪಕಾರ ಮಾಡುತ್ತಾರೆ !

ಈ ತೆರನಾದ ಕೆಲವೊಂದು ಅನುಭವದಿಂದ ನೊಂದುಬೆಂದವರು, "ಎಲ್ಲಿದೆ ಪರೋಪಕಾರ ? ಎಲ್ಲಿದೆ ಸಮಾಜಕಾರ್ಯ ? ಎಲ್ಲವೂ ಸ್ವಾರ್ಥ ; ವ್ಯಕ್ತಿಗಳ ಚಿನ್ನಾಟ; ವ್ಯಕ್ತಿಗಳ ಚೆಲ್ಲಾಟ 'ಸಮಾಜ' ಎಂಬುದು ಭ್ರಾಂತಿ; ಮಾಯಾಜಾಲ. ನೆಲೆತಿಳಿಯದೆ ಮೋಸಹೋಗಿ ಈ ಶಬ್ದವನ್ನು ಬಳಸುವ ಅರೆಮರುಳರು ಕೆಲವರು; ಮೋಡಿಕಾರನಂತೆ ತಿಳಿದೂ ತಿಳಿದೂ ಮಾಟ ಮಾಡುವುದಕ್ಕಾಗಿಯೇ ಈ ಶಬ್ದಜಾಲವನ್ನು ಬೀಸುವ ತಂತ್ರಗಾರರು ಹಲವರು," ಎಂದು ನಿಡುಸುಯ್ಯುವುದು ಕೇಳಬರುತ್ತದೆ.

ವ್ಯಕ್ತಿಯೆಂಬುದೆ ನಿಜ; ಸಮಾಜ ಕಾಲ್ಪನಿಕ. ತನ್ನ ಪಾಡಿಗಾಗಿ ಮಾಡಿದ್ದನ್ನೂ ಮಾಡುವುದನ್ನೂ ದೇವರ ಹೆಸರಿನಲ್ಲಿ ಮುಡಿಪಿಡುವಂತೆಯೆ ಸಮಾಜದ ಹೆಸರನ್ನು ಜನಗಳು ಉಪಯೋಗಿಸಿಕೊಳ್ಳುತ್ತಾರೆ. ತಮ್ಮ ನಾಲಗೆಯ ಸವಿಗಾಗಿ ಮಾಡಿದ (ಹಬ್ಬದ) ಅಡಿಗೆಯನ್ನು ನಿಮಿತ್ತಕ್ಕೆ ದೇವರ ಮುಂದೊಡ್ಡಿ ತಾವೇ ತಿಂಬುದು ವಾಡಿಕೆ ಮಹಾಕಾರ್ಯದ ಮೆರುಗನ್ನು ಕೊಟ್ಟು ತಮ್ಮ ಕೆಲಸ ಸಾಧಿಸಿಕೊಳ್ಳುವ ಜನದ ಬುದ್ಧಿವಂತಿಕೆ ಇದು !

ಊರು ಉಪಕಾರವರಿಯದು; ಹೆಣ ಶೃಂಗಾರವರಿಯದು. ಸಮಾಜ ವೆಂಬುದು ಇದ್ದರೂ ಅದೊಂದು ಹೆಣಕ್ಕೆ ಸಮಾನ, ಎಂಬ ಅನುಭವವೇ ಈ ಲೋಕೋಕ್ತಿಯಲ್ಲಿ ಅಡಕವಾಗಿಲ್ಲವೇ ? ನಾಡ-ನುಡಿಗಳು ನಾಡಿನ ಜನಗಳ ಅನುಭವದ ಸಾರವು ತಾನೆ? ಹಾಗಾದರೆ ಈ ಬಗೆಯಾದ ಗಾದೆಯ ಹಿನ್ನೆಲೆಯೇನು ? ಊರು—ಸಮಾಜ ಎಂಬುವು ಕಲ್ಪನಾಗಮ್ಯ—ಅವ್ಯಕ್ತ—ಅಪ್ರತ್ಯಕ್ಷ ವಿಷಯ. ಒಂದು ಬಗೆಯಿಂದ ನಿರ್ಜೀವವಾಗಿದ್ದಂತೆ. ಜೀವಂತ

ಒಂದು ವ್ಯಕ್ತಿಗೆ ಮಾಡಿದ ಉಪಕಾರಕ್ಕೆ ಪ್ರತಿಯಾಗಿ ಆ ವ್ಯಕ್ತಿಯಿಂದ ಏನಾದರೂ ನೆರವನ್ನು ಕೋರಬಹುದು. ಆದರೆ ಊರಿಗೆ ಅಥವಾ ದೇಶಕ್ಕೇ ಸಹಾಯ ಮಾಡಹೊರಟವರ ಲೆಕ್ಕ ಯಾರಿಗೂ ಹತ್ತುವುದು ಕಷ್ಟ. ಇಂತಹರು ಯಾರೂ ದಿಕ್ಕಿಲ್ಲದವರಾಗಿ ಕೂಳು-ಕೂಳು, ನೀರು-ನೀರೆಂದು ಸಾವುದೇ ಹೆಚ್ಚು. ಹೆಚ್ಚಾದರೆ, ಇಂತಹರಲ್ಲಿ ಒಬ್ಬಿಬ್ಬರ ಪುಣ್ಯಾತ್ಮರ ಪಾಲಿಗೆ ಲೋಕಮಾನ್ಯತೆಯ ಮಹಾತ್ಮ್ಯವು ಬಂದರೂ ಇವರನ್ನು ಜನ ಬಾಯ್ತುಂಬ ಹೊಗಳಿ, ಕೃತಿಯ ಹೊತ್ತು ಬರುತ್ತಲೆ ನೆರವಾಗದಲೆ ದೂರ ಹೋಗುತ್ತಾರೆ. ಅವರಿಗಾಗಿ ತಾವು ದುಡಿಯಬೇಕು, ಕೃತಜ್ಞರಾಗಿರ ಬೇಕು ಎಂಬ ಆಂತರಿಕ ಒತ್ತಾಯವು ಅಷ್ಟು ಬಲವಂತವಾಗಿರುವುದಿಲ್ಲ. ಪ್ರತ್ಯಕ್ಷ ತನಗೇ ಅನ್ನ-ವಸ್ತ್ರ ಕೊಟ್ಟು ಅಥವಾ ಸಂಕಟ ಸಮಯದಲ್ಲಿ ನೆರವಾದ ವ್ಯಕ್ತಿಯ ಹಂಗನ್ನೆ ನೆನೆಯಲು ತಪ್ಪಿಕೊಂಬ ಅಸಾಮಿಗಳಿರು ವಾಗ ಅಪ್ರತ್ಯಕ್ಷ ಉಪಕಾರಿಯ ಪಾಡೇನು ?

ಸಮಾಜವೆಂಬುದು ಕೃತ್ರಿಮ. ನಿಜವಾಗಿ ನೋಡಿದರೆ ಗಂಡು- ಹೆಣ್ಣು, ಬಳಿಕ ಮಕ್ಕಳು. ಅಯ್ತು; ಇಷ್ಟೇ, ಸ್ವಾಭಾವಿಕವಾದ ಒಂದು ಕುಟುಂಬ. ಇದಕ್ಕೆ ಮೀಕ್ಕಿದುದೆಲ್ಲ ಕೃತ್ರಿಮ. ಮಾನವ ಕುಟುಂಬ ಇತ್ಯಾದಿ ಮಾತುಗಳೆಲ್ಲ ಕೇವಲ ಆಭಾಸ. ಬುಡವಿಲ್ಲದುವು. ಮನೆಯ ಹೊರಗಿನ ಬಾಂಧವ್ಯವೆಲ್ಲ ಬಲವಂತನ ಮಾಘಸ್ನಾನ. ಜೀವನದ ಒತ್ತಾಯದ ಮೂಲಕ ಉಂಟಾದುದು. ಒಳಗಣಿಂದ ಬಂದುದಲ್ಲ; ಹೊರಗಣ ಲೇಪ. ಬದುಕಿಕೊಂಡಿ ರಲು ಅಥವಾ ತನ್ನ ಕೆಲಸ ಸಾಧಿಸಲು ಮಾನವನು ಮಾಡುವ ನಲುಮೆಯ, ಒಲುಮೆಯ ನಟನೆ. ಆದುದರಿಂದ ಕೇವಲ ತೋರಿಕೆಯದು. ತಾತ್ಪೂರ್ತಿಕ. ಸಮಾಜದಲ್ಲಿ ಅಥವಾ ಮನೆಯ ಹೊರಗೆ ಉಂಟಾದ, ಅಥವಾ ತೋರಿ ಬರುವ ಸ್ನೇಹ-ಋಣಾನುಬಂಧಗಳೆಲ್ಲವೂ ಸಿನೆಮಾ ಸೃಷ್ಟಿಯಂತೆ ಹೊರ ನೋಟಕ್ಕೆ ತುಂಬ ಮೋಹಕವಾಗಿದ್ದರೂ ಒಳಗೆ ಏನೂ ಹುರುಳಿಲ್ಲದುವು. ಕಾಂಚನ ಮೃಗದ ಬೆಂಬಳಿಸಿ ಹೋದಂತೆ ಹೊರಗಿನ ಹೆಸರಿಗೆ ಹಂದಾಡಿ ಕೆಟ್ಟೆನೆಂದು ಸಿಡಿಮಿಡಿಗೊಳ್ಳುತ್ತ, ಮಿಡುಕುತ್ತ, ಮಮ್ಮಲನೆ ಮರಗುತ್ತ ಕೊನೆಗೆ ತನ್ನ ಮನೆಯನ್ನೇ ಹುಡುಕಿಕೊಂಡು ಮರಳಿದವರ ಕತೆಗಳಿಂದ

ಸಮಾಜವೆಂಬುದು ಹುರುಳಿಲ್ಲದ ಮಾತೆಂದು ಮನವರಿಕೆಯಾಗುವಂತಿದೆ. ಸಾರ್ವಜನಿಕ ಸೇವೆಯಿಂದು ಹೊರಟು ಈ ತೆರನಾದ ಅನುಭವವು ಬಾರದ ಸರಲ ಸ್ವಭಾವದ ಸಜ್ಜನರೇ ವಿರಳ ಇದಕ್ಕೆ ಹೊರತಾಗಿದ್ದವರಲ್ಲಿ ಕೆಲರು 'ಬಿದ್ದರೇನಾಯ್ತು ? ಮೀಸೆಗೆ ಮಣ್ಣುಹತ್ತಿತೆ' ? ಎಂದು ತಮ್ಮ ಸೋಲನ್ನೇ ಒಪ್ಪದ ಜಿಗಟು ಜನ. ಅಥವಾ ಪರೋಪಕಾರ, ಸಾರ್ವಜನಿಕ ಸೇವೆಯ ಉದ್ಯೋಗದಿಂದ ಬದುಕುವವರೂ ಬದುಕುಮಾಡುವವರೂ ತಮ್ಮ ತಮ್ಮ ಕಟು ಅನುಭವವನ್ನು ಬಹಿರಂಗವಾಗಿ ಒಪ್ಪಿಕೊಳ್ಳುವುದು ಶಕ್ಯವೇ ? ನ್ಯಾಯವೆ ?

ಈ ಮಟ್ಟದಲ್ಲಿ ಆರಂಭವಾದ 'ಪಾಡಿನ' ಗತಿ ಏನು ? ಅಪಗತಿ. ಇದು ವಿ-ರಾಗದ ಪಾಡು. 'ಯಾರಿಗೆ ಯಾರೋ ಪುರಂದರ ವಿಠಲಾ' ! ಎಂಬುದೇ ಇದರ ಪಲ್ಲವಿ. ಯಾರೊಡನೆಯೂ ಮೇಳವಿಲ್ಲ. ಆದುದರಿಂದ ಇದರ ತಾಳವೊ ? ಬೇತಾಳ. ಅಲ್ಲಿಯೆ ಲಯ. ಇದು ನಿರಾಶೆಯ ಸ್ಥಾಯೀಭಾವದಲ್ಲಿ ತಲೆದೋರಿದ ವಿರಸದ ಸೂರು, ನಿಟ್ಟುಸಿರು.

ಮಾನವ-ಜೀವನದ ವಿಷಯದಲ್ಲಿ ಸರಿಯಾದ ಕಲ್ಪನೆಯಿಲ್ಲದ್ದರಿಂದ ಮೇಲಣ ಬಗೆಯ ಉದ್ಗಾರಗಳು ಹಲವರ ಬಾಯಿಂದ ಹೊರಬೀಳುವುದುಂಟು. ವಿಚಾರದೋಷ ಅಥವಾ ಸಂಸ್ಕಾರವಿಹೀನತೆಯೆ ಇಂತಹ ಮನೋವೃತ್ತಿಯ ಮೂಲಕಾರಣ. ಉದಾಹರಣಾರ್ಥವಾಗಿ, ಸಮಾಜವು ಕೃತ್ರಿಮ; ಕುಟುಂಬವು ಸ್ವಾಭಾವಿಕ ಎಂಬ ಅಭಿಪ್ರಾಯವನ್ನೇ ವಿಮರ್ಶಿಸಬಹುದು. ಕುಟುಂಬದಲ್ಲಾದರೂ ಸ್ವಾಭಾವಿಕತೆ ಏನಿದೆ ? ಅದನ್ನೂ ಮಾಯೆಯೆಂದು ಹೇಳುವ ಭಗವದ್ಭಕ್ತರು ಉಂಟಲ್ಲ ! ತಾಯ್ತಂದೆಗಳು ಮಕ್ಕಳನ್ನು ತಮ್ಮ ಜೀವಜೀವಾಳವೆಂದು ಬಗೆಯುತ್ತಿರಬಹುದು. ಆದರೆ ಮಕ್ಕಳ ಎಳೆತವು ದೊಡ್ಡವರಾದ ಹಾಗೆ ಎತ್ತಕಡೆಗೆ ? ತಮ್ಮ ನಲ್ಲೆಯತ್ತ ! ಮಕ್ಕಳತ್ತ ! ಮದುವೆನಿಂದೊಡನೆ ಮಕ್ಕಳು ತಮ್ಮ ಸ್ವತಂತ್ರ ಸಂಸಾರ ಹೂಡಬಯಸುವರು. ಮನೆತನಗಳು ಬೇರೆಯಾಗುವವು. ಮುಪ್ಪಿನ ಕಾಲಕ್ಕೆ ಮಕ್ಕಳು ತಮ್ಮನ್ನು ಮರೆತರೆಂದು ಹಲಬುವ ತಾಯ್ತಂದೆಗಳು ಎಷ್ಟಿಲ್ಲ ?

ಇನ್ನುಳಿಯಿತು, ಗಂಡ-ಹೆಂಡತಿಯ ಸಂಬಂಧ. ಇದರಲ್ಲಾದರೂ ಸ್ಥೈರ್ಯವೆಲ್ಲಿದೆ ? ಕೇವಲ ಲೌಕಿಕ ಅಪಕೀರ್ತಿಯ ಹೆದರಿಕೆ ಅಥವಾ ರೂಢಿಯ ಒತ್ತಾಯವೇ ಅನೇಕ ಕುಟುಂಬಗಳನ್ನು ಒಡೆಯಗೊಡದೆ ಒಡೆಯಗೊಡದೆ ಉಳಿಸಿದೆ ಅನಿವಾರ್ಯವಾದ ನಿರ್ಗತಿಕ ಪರಿಸ್ಥಿತಿಯ ಮೂಲಕವಾಗಿಯೋ ಧಾರ್ಮಿಕ ಇಲ್ಲವೆ ಪಾರಲೌಕಿಕ ಭೀತಿಯಿಂದಲೋ ಮನೆಮನೆಗಳಲ್ಲಿ ಗಂಡು-ಹೆಣ್ಣು ಒಗೆತನ ನಡೆಸಿವೆಯಲ್ಲದೆ, ಒಲುಮೆಯಿಂದ ನಲುಮೆಯಿಂದ ಒಂದುಗೂಡಿವೆಯೆಂಬುದು ಕಷ್ಟ

ಹೀಗಾದಲ್ಲಿ ಕೊನೆಗೆ ........ಏನು ?

ಕೊನೆಗೆ – ನಾನು ಒಬ್ಬನೇ ! ....... ನಾನು ಒಬ್ಬನೇ ?

ಈ ಸಂದರ್ಭದಲ್ಲಿ ಗಾಂಧೀಜಿಯವರ ಅನುಭವದ ವಚನವೊಂದು ನೆನಪಿಗೆ ಬರುತ್ತದೆ : ಲೋಕದಲ್ಲಿ ನನಗೆ ಎಲ್ಲರೂ ಗೆಳೆಯರೆ ಅಲ್ಲವಾದರೆ ಯಾರೂ ಅಲ್ಲ. ಬಾಳಿನಲ್ಲಿ ಸತ್ಯದೊಡನೆ ನಡೆಸಿದ ಪ್ರಯೋಗಗಳಲ್ಲಿ ಮಹಾತ್ಮರಿಗೂ ಮನವರಿಕೆಯಾದ ಮಾತಿದು. ಆತ್ಮಚರಿತ್ರೆಯಲ್ಲಿ ಈ ಸಂಗತಿಯನ್ನು ಉಲ್ಲೇಖಿಸಿದ್ದಾರೆ ಹಾಗಾದರೆ ಈ ವಚನದ ಅರ್ಥ ವೇನು ? ಈ ಲೋಕದಲ್ಲಿ ನಾನು ಒಬ್ಬನೇ, ಎಂದೊ ? ಗಾಂಧೀಜಿಯವರ ನಡೆವಳಿಯು ಇದನ್ನು ಪುಷ್ಟೀಕರಿಸುವುದೆಂದು ಹೇಳಬಹುದೊ ?

ಮನೆಯಲ್ಲಾಗಲಿ, ಮನೆಯ ಹೊರಗಾಗಲಿ, ತಮ್ಮ ಅಪೇಕ್ಷೆಗಳನ್ನು ವಾಸ್ತವವನ್ನು ಲೆಕ್ಕಿಸಿ ಪ್ರಮಾಣಬದ್ಧವಾಗಿ ಇರಿಸಿಕೊಳ್ಳಲು ಆಗದ ವ್ಯಕ್ತಿ ಗಳಿಗೆ ಜೀವನದಲ್ಲಿ ಅಡಿಗಡಿಗೂ ನಿರಾಶೆಯು ಭೆಟ್ಟಿಯಾಗದೆ ಇದ್ದರೆ ಸೋಜಿಗ. ಮಕ್ಕಳು ತಮ್ಮನ್ನು ಕಡೆಗಣಿಸಿ, ಹೆಂಡಿರು-ಮಕ್ಕಳಲ್ಲಿ ವ್ಯೈಮರೆತ ರೆಂದು ಗೊಣಗುವ ತಾಯ್ತಂದೆಗಳು ಸೃಷ್ಟಿಕ್ರಮವನ್ನು ಒಂದರಗಳಿಗೆ ಅವಲೋಕಿಸಬೇಕು. ಮನುಷ್ಯೇತರ ಪ್ರಾಣಿಗಳಲ್ಲಿ ಕಾಣುವ ರೀತಿ ಯಾವುದು ? ಮನುಷ್ಯನೂ ಒಂದು ಪ್ರಾಣಿಯೇ. ಆದರೆ ವಿಚಾರ-ಸಂಸ್ಕಾರ ಗಳಿಂದ ಸಂಸ್ಕೃತಿಯನ್ನು ಹೆಚ್ಚಿಸಿಕೊಂಡಿದ್ದಾನೆ. ಮಕ್ಕಳು ಆ ಸಂಸ್ಕೃತಿ ಯನ್ನು ಪಡೆದುಕೊಂಡು ತಾವು ಪಶುಗಳಿಗಿಂತಲೂ ಸುಧಾರಿಸಿದವರೆಂದು ಕೃತಿಯಿಂದ ಸಿದ್ಧಪಡಿಸಬೇಕಿತ್ತು. ಆದರೆ ಆ ಸಂಸ್ಕೃತಿಯನ್ನು ಅವರು ಪಡೆದುಕೊಂಬುವುದಕ್ಕೆ ಅಥವಾ ತಾಯ್ತಂದೆಗಳು ಅವರಿಗೆ ಕೊಡುವದಕ್ಕೆ

ಅಸಮರ್ಥರಾದುದು ಇದರಿಂದ ಸಿದ್ಧವಾಗುತ್ತದೆ. ತಪ್ಪಿನ ಪ್ರಾಯಶ್ಚಿತ್ತ ವಿದು. ಅಥವಾ ಮಕ್ಕಳಿಂದ ಮಿತಿಗಿಂತಲೂ ಹೆಚ್ಚಿನ ಅಪೇಕ್ಷೆಪಡುವುದು, ಅನೇಕ ತಾಯ್ತಂದೆಗಳು ತಮ್ಮ ಹಕ್ಕು ಎಂದೇ ಬಗೆದಿರುತ್ತಾರೆ. ಗಂಡಿಗೆ ಹೆಣ್ಣಿನ ಆಕರ್ಷಣ; ಹೆಣ್ಣಿಗೆ ಮಕ್ಕಳ ಹುಚ್ಚು; ಇದು ಸೃಷ್ಟಿಕ್ರಮ. ಇದಕ್ಕೆ ವಿಪರೀತವಾಗದಂತೆ ಏನನ್ನು ಹಾರೈಸಲಿಕ್ಕಾದೀತೊ ಅಷ್ಟೇ ಲೇಸು. ಇದನ್ನು ಮೀರಿ ಮಾಡಬಯಸುವ ಕಸರತ್ತು ಅಸ್ವಾಭಾವಿಕ. ಅದು ಸಹಜ ಮಧುರ ಕಾರ್ಯವೆನಿಸಲಾರದು. ಇಂತಹ ಸಂದರ್ಭಗಳಲ್ಲಿ ನಿರಾಶೆಯು ನಿಶ್ಚಿತ.

ನಿರಾಶೆಯು ಪರಮಾವಧಿಯಾಗಿ, 'ನಾನು ಒಬ್ಬನೇ' ಎಂಬ ನಿರ್ಧಾರಕ್ಕೆ ಬಂದ ವ್ಯಕ್ತಿಗಳಲ್ಲಿ ಎರಡು ಅಂದಗಳಿವೆ. ಬಡತನದಲ್ಲಿ ಸಿಲುಕಿದವರಾಗಿದ್ದರೆ ಇಂತಹರ ಬಾಳಿನ ಬಗೆಯು ವೈರಾಗ್ಯಪರವಾಗಿ ಬೆಳೆದು ಅವರು ದೈವವಾದಿಗಳಾಗುವರು. ಇಂತಹರು ಓಡಿಹೋಗಿ ಕಾಡುಸೇರಬಹುದು. ಆತ್ಮಹತ್ಯೆ ಮಾಡಿಕೊಳ್ಳಬಹುದು. ಅಥವಾ ಸನ್ಯಾಸಿಗಳಾಗಿ ಅಲೆಯಬಹುದು. ಹಾಗೆ ಅಲೆಯುತ್ತಿರುವಾಗಲೆ ದೈವಯೋಗದಿಂದ 'ಲಂಗೋಟಿ ಸಂಸಾರಕ್ಕೆ' ಆರಂಭವಾಗಿ ಹಿರಿಯ ಮಠಗಳನ್ನು ಕಟ್ಟಿ ಒಂದು ದಿಕ್ಕಿನಲ್ಲಾದ ಮುಖಭಂಗವನ್ನು ಇನ್ನೊಂದು ದಿಕ್ಕಿನಲ್ಲಿ, ಆಧ್ಯಾತ್ಮದ ಹೆಸರಿನಲ್ಲಿ ಬಡ್ಡಿ ಸಹಿತ ತುಂಬಿಕೊಳ್ಳಬಹುದು. ಇದು ಒಂದು ಬಗೆ.

ಇನ್ನೊಂದು ಬಗೆಯವರಲ್ಲಿ ಸಂಪಾದನಾಶಕ್ತಿಯು ಚೆನ್ನಾಗಿರುತ್ತದೆ. ಇಂತಹರಲ್ಲಿ ವೈರಾಗ್ಯಭಾವವು ವಿಶೇಷ ತಲೆಯೆತ್ತುವುದಿಲ್ಲ. ಹಲವು ಬಗೆಯ ಕಟು ಅನುಭವಗಳಿಂದ ಮನದಲ್ಲಿ ವಜ್ರಲಿಖಿತವಾದ 'ಸಂಸಾರದಲ್ಲಿ ಯಾರಿಗೆ ಯಾರೂ ಅಲ್ಲ. ನನಗೆ ನಾನೇ' ಎಂಬ ಕಹಿ ನೆನಹನ್ನು ಮಾತ್ರ ಮರೆಯಲು ಅವರು ಎಂದೂ ಸಮರ್ಥರಾಗುವುದಿಲ್ಲ. ಇವರ ವೈಭವದೊಂದಿಗೆ ಸುತ್ತಲೂ ಬೆಳೆಯುತ್ತಿರುವ ಬಳಗಕ್ಕೆ 'ಗಂಟಿರುವನಕ ನೆಂಟರು' ಎಂದು ನಿಷ್ಠುರವಾಗಿ ನುಡಿಯುವುದಕ್ಕೂ ಹೇಸರು. ವಿಪರೀತ ದೈನ್ಯಾವಸ್ಥೆಯ ವಿಷಮ ಪರಿಸ್ಥಿತಿಯಲ್ಲಿ ಮೂಡಿದ 'ನಾನು ಒಬ್ಬನೇ' ಎಂಬ ಭಾವವು ದೈವುಳ್ಳವರಾದ ಮೇಲೆ 'ನಾನೇ ಒಬ್ಬನು' ಎಂದು ಮಾರ್ಪಡಲು ತಡವಾಗುವುದಿಲ್ಲ.

ಶಕ್ತಿವಂತರಲ್ಲಿ 'ನಾನೇ ಒಬ್ಬನು' ಎಂಬ ಭಾವವು ದೃಢವಾಗಿ ಬಲಿತು ಕೊಂಡಂತೆ ಆಸುರೀವೃತ್ತಿಯು ಕೇಡಾಳಿಗಳಾಗುವುದು ಖಚಿತ. ಲೋಕದ ಎಲ್ಲ ಸೂತ್ರಗಳೂ ತಮ್ಮ ಕೈಯಲ್ಲಿಯೇ ಬರಬೇಕೆಂಬ ಲೋಭವು ಬೇಗನೆ ಇವರನ್ನು ಕವಿಯುವುದು. ಇದರಿಂದ ಬೆಳೆಯುವ ಪೀಳಿಗೆಯೊಳಗಿನ ಗುಣಿಗಳಿಗೆ ಇಂತಹರ ಅಹಂಕಾರ, ಆಢ್ಯತೆಗಳಿಂದ ಹಲವು ಬಗೆಯಾದ ಅಡೆತಡೆಗಳುಂಟಾಗುವವು. ಇಂತಹ ಹೆಮ್ಮೆಯನ್ನು ತಗ್ಗಿಸದೆ ಸುಮ್ಮನಿದ್ದಲ್ಲಿ ಇವರು ತಮ್ಮ ಇಷ್ಟಸಿದ್ಧಿಗಾಗಿ ಬೇಕಾದ ಅಧಮ ಉಪಾಯಗಳನ್ನೂ ಉಪ ಯೋಗಿಸಿ ಲೋಕಕಂಟಕರಾಗುವರು.

'ನಾನು ಒಬ್ಬನೇ' ಎಂಬ ನಿರಾಶೆಯು ಆವರಿಸಲು ಸಾಮಾನ್ಯ ಕೆಲವು ಕಾರಣಗಳಿವೆ : ಹೆರವರ ಮೇಲೆ ಅವಶ್ಯಕತೆಗಿಂತ ಹೆಚ್ಚು ನೆಮ್ಮಿ ಬಾಳುವ ಪ್ರಸಂಗವು ಬಂದಾಗ ಅಥವಾ ತಂದುಕೊಂಡಾಗ ಆ ಜನಗಳು ಕಾರಣಾಂತರ ದಿಂದ ಸರಿದು ಬದಿಗಾಗುತ್ತಲೆ, ಈಗ ತನ್ನ ಕಾಲಮೇಲೆ ತಾನು ನಿಲ್ಲದೆ ಗತಿಯಿಲ್ಲವೆಂಬ ಕಠೋರ ಸತ್ಯದ ಮನವರಿಕೆಯಾಗುವುದು. ತನ್ನ ವೈಯಕ್ತಿಕ ಯೋಗ್ಯತಾ ವಿಶೇಷದಿಂದ ಅಥವಾ ಕೈಕೊಂಡ ಕಾರ್ಯದ ಹಿರಿಮೆ ಹೆಚ್ಚಳದ ಮೂಲಕ ಜನರ ಸಹಕಾರವನ್ನು ಪಡೆದು ತನ್ನ ಕೆಲಸ ವನ್ನು ಹಗುರು ಮಾಡಿಕೊಳ್ಳುವ ಹದವನ್ನು ಅರಿಯದವರಿಗೆ ಮೇಲಣ ತೆರನಾದ ನಿರಾಶೆಯು ತಪ್ಪಿದ್ದಲ್ಲ. ದೇಶಕಾರ್ಯ, ಸಾಹಿತ್ಯಸೇವೆ, ಧರ್ಮಕಾರ್‍ಯಾದಿ ಬಣಗುಮಾತಿನ ಆಟಹೂಡಿ, ಐಂದ್ರಜಾಲಿಕ ವಿದ್ಯೆಯಿಂದ ಆಶೆ ಆಮಿಷಗಳನ್ನು ಒಡ್ಡಿ, ಜನಗಳನ್ನು ತಮ್ಮ ಬಲೆಯಲ್ಲಿ ಹಿಡಿಯುವ ಹೊಂಚು ಬಹಳ ದಿನಗಳ ವರೆಗೆ ಸಾಗುವುದು ಶಕ್ಯವಿಲ್ಲ. ಯಾವನ ಬಳಿಯಲ್ಲಾದರೂ 'ನಾನೇ ಒಬ್ಬ; ನನ್ನಿಂದಲೇ ಇದೆಲ್ಲ', ಎಂಬೀ ತೆರನಾದ ಮಾತಿನ ನಾತವು ಬರುತ್ತಲೆ ಹತ್ತಿರದವರ ಉಸಿರುಗಟ್ಟುವುದು. ಆರಂಭಕ್ಕೆ 'ನಿಮ್ಮಲ್ಲಿ ನಾನೂ ಒಬ್ಬ'ನೆಂದು ನಂಬಿಸಿ, ಕೆಲಸವು ಊರ್ಜಿತ ಸ್ಥಿತಿಗೆ ಬಂದಂತೆ, 'ಇದನೆಲ್ಲ ಮಾಡಿದವ ನಾನೇ ಒಬ್ಬ' ಎಂಬಂತೆ ಹತ್ತಿರದವರ ತಲೆಮೆಟ್ಟಿ ನಿಂತು ನಂಬಿಸಿ ತಿಂಬವರ ನೆರಳಿಗೆ ನಿಲ್ಲಲಿಕ್ಕೂ ಜನ ಹೇಸಿ ಕೊಳ್ಳುವರು.

ಆದುದರಿಂದ 'ನಾನು ಒಬ್ಬನೇ' ಎಂಬ ಉಗ್ರ ಕಠೋರ ಅನುಭವಕ್ಕೆ ಲೋಕವು ವಿಶೇಷ ಕಾರಣವಲ್ಲ; ಆಯಾ ವ್ಯಕ್ತಿಗಳ ಪ್ರಮಾಣ ಮೀರಿದ ಅಪೇಕ್ಷೆಗಳು, ಅವರ ಹದಗೇಡಿ ನಡೆವಳಿ ಇವೆ ಮುಖ್ಯ ಕಾರಣ. ಆದರೂ 'ನಾನು ಒಬ್ಬನೇ;' ಅಥವಾ 'ನಾನೇ ಒಬ್ಬನು' ಎಂಬುದು ಸತ್ಯವೆ ? ಯುಕ್ತವೆ?

'ಸಂಸಾರನೆಂಬುದಿದು ನಾಲ್ಕು ದಿನದ ಸಂತೆ;' 'ಸಂಗಡ ಯಾರೂ ಬಾರೋರಿಲ್ಲ;' ಆದುದರಿಂದ 'ಆತ್ಮಾರ್ಥೇ ಪೃಥಿವೀಂ ತ್ಯಜೇತ್.' ಸರಿ; ಪೃಥ್ವಿಯನ್ನು ತ್ಯಜಿಸಿ ಹೋಗೋದೆಲ್ಲಿ ? ದೇಹತ್ಯಾಗ ಮಾಡಿದ್ದಲ್ಲದೆ ಪೃಥ್ವಿಯನ್ನು ಬಿಟ್ಟು ಕದಲಲು ಸಾಧ್ಯವೇ ಇಲ್ಲ. ಆದುದರಿಂದ ಈ ದಾರಿಯಲ್ಲಿ ಹೋಟೆವರಿಗೆ ಜಲಾಶಯ, ವಿಷ ಇಲ್ಲವೆ ಹಗ್ಗವೇ ಯಮನ ಮೊದಲು ಗತಿ. ಆದರೆ ಜೀವತೊರೆವುದಕ್ಕೂ ಎದೆಗಾರಿಕೆ ಬೇಕಾಗುತ್ತದೆ. ಸತ್ತಿಲ್ಲವೆಂದು ಬದುಕಿರುವ ಈ ಜನ, ಬೇಗ ಭೂಭಾರ ಕಡಿಮೆ ಮಾಡದೆ ಹೇಡಿತನದಿಂದ ನೆಲದ ಆಶ್ರಯ ಪಡೆಯುವರು; ನಿಂತ ನೆಲವನ್ನೇ ಹಿಯಾಳಿಸುತ್ತ ದಿನ ನೂಕುವರು. ಇದು ನ್ಯಾಯುವೆ ? ಧರ್ಮವೆ ? ಉಂಟಾದ ನಿರಾಶೆಗೆ ಯಾರೊ ಕೆಲರು ಕಾರಣರಾಗಿರುತ್ತಾರೆ. ಹಾಗಿರುವಾಗ, ನಿರಾಶೆಯ ಭರದಲ್ಲಿ ಕಣ್‌ಗೆಟ್ಟು ಲೋಕವೇ ನೀಚವೆಂದು ತೆಗಳುವುದು ಸಭ್ಯತೆಗೆ ಶೋಭಿಸುವುದೆ? ತನ್ನ ಕಣ್‌ಕೆಟ್ಟು ಕಾಣದಾಯ್ತೆಂದು ಲೋಕವೆಲ್ಲ ಅಂಧಃಕಾರಮಯವಾಯ್ತೆಂದು ಕಿರಚುವವನ ತಲೆ ಸಮನಾಗಿದೆಯೆನ್ನಲಾದೀತೆ ?

ವಿಷಾದದ ಪರಮಾವಧಿಯಲ್ಲಿ ವ್ಯಕ್ತಿಯು ಭಾವಿಸಿಕೊಳ್ಳುವಷ್ಟು ಅದು ಏಕಾಕಿ—ಎಂದರೆ ಬೇರೆ ಯಾರಿಗೂ ಯಾವುದಕ್ಕೂ ಸಂಬಂಧವಿಲ್ಲದ, ಒಂದೇ ಒಂದು ಆತ್ಯಂತಿಕ ಭಿನ್ನವಸ್ತುವಾಗಿದೆಯೆ ?

ಒಬ್ಬರೆ ಇದ್ದರೆ ಸಮಾಧಾನವೆ ? ಯಾರ ಕಾಟವೂ ಬೇಡ, ಎಂದು ದೂರ ದೂರ—ಬಹುದೂರ ಹೋಗಿ ಏಕಾಂತ ಸೇರಿದರೂ ತನ್ನೊಳಗೆ ತಾನು ಇನ್ನೂ ಒಂದರೊಡನೆ ಸಹ-ಗಮನ ಮಾಡವ ಶಕ್ತಿಯಿಲ್ಲದೆ ಆಟ್ಟೇಕಾಂತವನ್ನು ಸೇರಿಯೂ ವ್ಯರ್ಥ. ಎರಡರ ಹಿನ್ನೆಲೆಯಲ್ಲಿ ಅಖಂಡವಾಗಿ ಸಾಕ್ಷಿಭೂತವಾಗಿರುವ ಮೂರನೆಯದರ ಅರಿವು, ಅನುಭಾವವುಂಟಾಗುವನ್ನಕ್ಕರ ಏಕಾಂತದ ಆನಂದವು, ಸ್ವಾನುಭವಸುಖರಸಾಯನವು

ದೊರೆಯದು. ಹಾಗಾದರೆ, ಯಾರೂ ಬೇಡವೆಂಬುದು ಬರಿಯ ಭ್ರಮೆ ಯಲ್ಲವೆ ? ತನ್ನೊಳಗೆ ತಾನು ಹೊಂದಿಕೆ ಮಾಡಿಕೊಳ್ಳಲಿಕ್ಕಾಗದವನು ಉಳಿದವರೊಡನೆಯೂ ಹಾಗೆಯೆ ಸರಿ; ಆತನಿಗೆ ಅಡವಿಯಲ್ಲಿದ್ದರೂ ಏಕಾಂತವಿಲ್ಲ. ಅಂತರಂಗದಲ್ಲಿ ಮೇಳವಿದ್ದವನು ಸಂತೆಯಲ್ಲಿದ್ದರೂ ಏಕಾಂತವನ್ನು ಅನುಭವಿಸಬಲ್ಲನು. ನೆರೆಹೊರೆಯವರ ಮೇಲೆ ಮುನಿದು, ಸೆಡವಿನಿಂದ, ಹೆಮ್ಮೆಯ ಬಿಂಕದಿಂದ, ಜುಗುಪ್ಸೆಯಿಂದ ದೂರ ಸಿಡಿವವರು, ಇನ್ನುಳಿದವರೊಡನೆ ಹೊಂದಿಸಿಕೊಳ್ಳಲಿಕ್ಕಾಗದೆ ಇರುವ ತಮ್ಮ ಅಯೋಗ್ಯ-ತೆಯ ಪ್ರದರ್ಶನವನ್ನೆ ಮಾಡುತ್ತಾರೆ. ಏಕಾಂತದ ಆನಂದಕ್ಕಾಗಿ ಇವರು ಬೇರೆಯಾಗಿ ನಿಂತಿರುವುದಿಲ್ಲ. ಏಕಾಂತದ ಆನಂದಕ್ಕಾಗಿ ಸಮ್ಯ-ಗಂತರದಲ್ಲಿದ್ದವನು ತನ್ನಲ್ಲಿ ಲೋಕವನ್ನೆ ಕಾಣಬಲ್ಲವನಾಗಿರುತ್ತಾನೆ ಈ ಕಾರಣದಿಂದ ತಾನು ಒಬ್ಬನೇ ಎಂಬುದು ಅಲ್ಪವಿಚಾರದ, ಸಂಕುಚಿತ ಮನದ, ತನ್ನ ನೆಲೆ ತನಗರಿಯದ ಅಲ್ಪರ ಕುತ್ತುಸಿರು; ನಿಟ್ಟುಸಿರು.

ವ್ಯಕ್ತಿಯು ತನ್ನ ಭಾವ-ಬುದ್ಧಿಗಳನ್ನು ವಿಕಾಸಪಡಿಸಿಕೊಂಡು ಪ್ರೀತಿಯ ತನ್ಮಯತೆಯಿಂದ ತನ್ನಿಂದ ಬೇರೆಯೆನಿಸುವ ಹಲವಾರು ವ್ಯಕ್ತಿ-ವಸ್ತುಗಳೊಡನೆ ಒಂದಾಗಿ ತಾದಾತ್ಮ್ಯವನ್ನೂ—ಅಭಿನ್ನತೆಯ ಅನುಭವ ವನ್ನೂ ಪಡೆಯಬಲ್ಲನು. ತನ್ನಲ್ಲಿರುವ ಈ ಸಹಜ-ಶಕ್ತಿಯನ್ನು ವ್ಯಕ್ತಿಯು ಆತ್ಮವಿಕಾಸಕ್ಕಾಗಿ ಸರಿಯಾಗಿ ಉಪಯೋಗಿಸಿಕೊಳ್ಳುವ ಹದವನ್ನು ಅರಿತು ಕೊಳ್ಳದೆ ಇದ್ದರೆ ಅದು ಆತನ ದುರ್ದೈವ. ಮಾನವನು ಭಾವ-ಬುದ್ಧಿಗಳ ಯೋಗದಿಂದ ತನ್ನ ಜೀವಾಳದ ಅಂಶವನ್ನೇ ಇನ್ನೊಂದರಲ್ಲಿ ಎರೆಯಬಲ್ಲನು. ಈ 'ಎರಕ'ಕ್ಕೆ ಪ್ರೀತಿ ಎಂಬ ಹೆಸರು. ಈ ಬಗೆಯಾಗಿ ವ್ಯಕ್ತಿಯ ಆತ್ಮವು ಹಿಗ್ಗಲು ಹಂಬಲಿಸುತ್ತದೆ. ಹಿಗ್ಗುವಲ್ಲಿ—ಹಿರಿದಾಗುವಲ್ಲಿಯೇ ಅದಕ್ಕೆ ಹಿಗ್ಗು (ಆನಂದ) ಉಂಟು. ಭೂಮಾ ವೈ ಸುಖಂ ಎಂಬುದು, 'ಹಿಗ್ಗು' ಎಂಬ ಕಂನುಡಿಯ ಆಳವಾದ ಅರ್ಥಕ್ಕೆ ಸಂಸ್ಕೃತಭಾಷ್ಯ.

ನಲ್ಲೆಯ ಹಿಗ್ಗಿಗಾಗಿ ನಲ್ಲನು ಯಾವ ತ್ಯಾಗಕ್ಕೂ ಸಿದ್ಧನಾಗುವನು; ಆ ಕಷ್ಟವು ಕಷ್ಟವೆನಿಸದು. ಪ್ರೇಮಿಗಾಗಿ ಮಾಡುವ ಶ್ರಮದಲ್ಲಿ ಆನಂದದ

ಅನುಭವವು ಬರುವುದು. ಮಕ್ಕಳು ಉಂಡರೆ ತಾಯಿಗೆ ತಾನು ಉಂಡಷ್ಟು ಸಂತೋಷವೇಕೆ ? ತನ್ನ ಮೆಚ್ಚಿನ ಪೆನ್ನು – ನಿರ್ಜೀವವಸ್ತು ನೋಡಿದರೆ !– ಕಳೆದರೆ ತನ್ನ ದೇಹದ ಒಂದು ಅಂಶವೇ ಹೋದಷ್ಟು ವ್ಯಥೆಯೆ ? ಒಬ್ಬರಿಗೆ ಬಿದ್ದ ಪೆಟ್ಟಿನ ನೋವು ಇನ್ನೊಬ್ಬರಿಗೆ ಆಗುವುದು ವಿಚಿತ್ರವಲ್ಲವೆ? ಗಾಂಧೀಜಿ ಮಡಿದರೆ ಲೋಕಕ್ಕೆಲ್ಲ ಕಣ್ಣೀರೆ ! ಗಾಂಧೀಜಿಯು ಮಹಾ-ಆತ್ಮನಾಗಿ ಆತ್ಮವಿಕಾಸಗೊಳಿಸಿಕೊಂಡು ಲೋಕದೊಡನೆ ಸಮರಸರಾಗುತ್ತಿದ್ದ ರೆಂಬುದರ ಪ್ರತ್ಯಕ್ಷ ಪ್ರಮಾಣವೇ ಅಲ್ಲವೋ ಇದು ? ಯಾರ ತಪಸ್ಸಿನ (ಪ್ರಯತ್ನದ) ಸಾಮರ್ಥ್ಯವು ಎಷ್ಟೋ ಅಷ್ಟು ಅವರು ತಮ್ಮ ಆತ್ಮವನ್ನು ಹಿಗ್ಗಿಸಬಲ್ಲರು; ಮಹತ್ತಾಗಿಸಬಲ್ಲರು. ಈ ಅನುಭಾವವು ಪುಟಗೊಂಡಂತೆ ಆಗಲೆ 'ಸಮಾಜ' ಎಂಬುದರ ವಿರಾಟ್ ಸ್ವರೂಪವು ಕಣ್ಣೆದುರು ನಿಲ್ಲುವುದು.

ಕುಟುಂಬವು ಸಮಾಜದ ಪ್ರಾಥಮಿಕ ರೂಪ; ವ್ಯಕ್ತಿಯು ವಿಕಾಸ ದೊಳಗಿನ ಮೊದಲ ಘಟ್ಟ. ಹಿಗ್ಗು ವ್ಯಕ್ತಿಯ ಹುಟ್ಟುಗುಣ. ಅದರ ಪ್ರತ್ಯಕ್ಷ ಅನುಭವವು ಲೋಕಸಂಬಂಧದಲ್ಲಿ ಬರುವುದು ಇಂತಹ ಹಲವು ಬಗೆಯ ಸೂಕ್ಷ್ಮ ಸಂಬಂಧಗಳಿಂದ ಹೆಣೆದುಕೊಂಡ ತಮ್ಮತನದ ವಾತಾವರಣವುಳ್ಳ ಸುಸಂಬದ್ಧ ಗುಂಪಿಗೆ 'ಸಮಾಜ'ವೆಂಬ ಹೆಸರು.

ಕುಟುಂಬ ಅಥವಾ ಕುಲ, ಮತ್ತು ಸಮಾಜ ಎಂಬ ಪದಗಳು ಸಮಾಜಶಾಸ್ತ್ರದ ಚರ್ಚೆಯಲ್ಲಿ ವಿಶಿಷ್ಟಾರ್ಥದಲ್ಲಿ ಉಪಯೋಗಿಸಲ್ಪಡುತ್ತವೆ. ಒಂದು ಪ್ರದೇಶದಲ್ಲಿ ವ್ಯಾಪಿಸಿರುವ ಮನೆತನಗಳು ಸೇರಿ ಕುಟುಂಬವೆನಿ ಸುವುದು. ಓಣಿ, ಕೇರಿ, ಹಳ್ಳಿ, ದೇಶಗಳಷ್ಟು ಕುಟುಂಬವು ವಿಸ್ತಾರವಾಗ ಬಲ್ಲದು. ಮಾನವ ಕುಟುಂಬವೆ ಇದರ ಪರಮೋಚ್ಚ ವಿಕಾಸವು. ಆದರೆ ಬಳಗ ಎಂಬ ಅರ್ಥದಲ್ಲಿಯೆ ಕುಟುಂಬವೆಂಬುದು ಹೆಚ್ಚು ಉಚಿತ. ಊಟ-ಉಡಿಗೆ ವಿವಾಹಾದಿಗಳಿಂದ ಬೆಳೆಯುತ್ತಿರುವ ಬಳಗವೇ ನಿಜವಾದ ಕುಟುಂಬವಾಗಬಲ್ಲದು. ಕುಟುಂಬ ಅಥವಾ ಕುಲವು ಸ್ಥೂಲ: ಅದು ಬಳಗ. ಆಂತರಿಕ ಸಂಬಂಧಗಳೇ ಅಲ್ಲಿ ಮುಖ್ಯ. ಆದರೆ ಸಮಾಜದಲ್ಲಿ ಆಂತರಿಕ ಸಂಬಂಧಗಳಿಗಿಂತ ಬಾಹ್ಯ ವ್ಯಾವಹಾರಿಕ ಕಾರಣ ಗಳು ಅದರ ಸ್ಥೈರ್ಯಕ್ಕೆ ಕಾರಣವಾಗಿರುತ್ತವೆ. ಮಾನವ ಕುಟುಂಬ

ಅಥವಾ ಕುಲ; ಅದರಲ್ಲಿ ಯುರೋಪೀಯ ಸಮಾಜ; ಅಮೇರಿಕೆಯ ಸಮಾಜ; ಭಾರತೀಯ ಸಮಾಜ ಮುಂ. ಇದರಂತೆ ಧಾರ್ಮಿಕ, ರಾಜಕೀಯ, ಅಥವಾ ಜಾತೀಯ ಸಮಾಜಗಳೆಂದೂ ಹೇಳಲವಕಾಶವಿದೆ. ಇಡೀ ಮಾನವ ಸಮಾಜವೆಂದರೂ ಆಗಬಹುದಾಗಿದೆ. ಆದರೆ ಅದು ಇನ್ನೂ ನಿರ್ಮಾಣವಾಗಬೇಕಾಗಿದೆ. ಕುಟುಂಬ ಅಥವಾ ಕುಲದ ಸಂಬಂಧಗಳು ಹುಟ್ಟಿನಿಂದಲೆ ಬಂದುವು. ಸಮಾಜದುವು, ನಮ್ಮ ನಡೆವಳಿಯಿಂದ ಸಂಸ್ಕೃತಿಯಿಂದ ನಿರ್ಮಾಣ ಮಾಡಿಕೊಂಡಂತಹವು. ಆದುದರಿಂದ ಕುಟುಂಬವು ಹುಟ್ಟಿನಿಂದ ಬಂದುದು. ಸಮಾಜವು ನಾವು ಮಾಡಿಕೊಂಡುದು.

ಭಾರತದಲ್ಲಿ 'ಸಮಾಜ' ಎಂಬುದು ಇನ್ನೂ ನಿರ್ಮಾಣವಾಗಬೇಕಾಗಿದೆ. ಆದುದರಿಂದಲೇ ನಮ್ಮ ದೇಶದಲ್ಲಿ ಸಾಮಾಜಿಕತೆ ಇನ್ನೂ ತೀರ ಪ್ರಾಥಮಿಕ ಸ್ಥಿತಿಯಲ್ಲಿದೆ. ನಮ್ಮಲ್ಲಿ ಜಾತಿಗಳು ಬೆಳೆದುವು; ಧರ್ಮಗಳು ವಿಕಾಸಗೊಂಡುವು ರಾಜ್ಯಗಳು ಪ್ರವರ್ಧಮಾನ ಸ್ಥಿತಿಗೆ ಬಂದುವು ಆದರೆ 'ಸಮಾಜ' ಎಂಬುದು ಆರೋಗ್ಯಕರವಾಗಿ ಬೆಳೆಯಲೆ ಇಲ್ಲ. ಏಕೆಂದರೆ ಅದು ಹಾಗೆ ಬೆಳೆಯಲು ಅವಶ್ಯಕವಾದ ವಾತಾವರಣವು, ಈ ವರೆಗೆ ಇಲ್ಲಿ ಸಿಕ್ಕಲೇ ಇಲ್ಲ. ಆದುದರಿಂದ ಸಮಾಜದ ಸರಿಯಾದ ಅರಿವು ನಮ್ಮಲ್ಲಿ ಬಹು ಜನರಿಗೆ ಇಲ್ಲ.

ಪರಲೋಕ-ಸಾಧನವೇ ಜೀವನದ ಹಿರಿಗುರಿಯಾದ ಭಾರತೀಯರು, ನಿರ್ವಾಹವಿಲ್ಲದೆ ಎಷ್ಟೊ ಅಷ್ಟಕ್ಕಿಂತ ಹೆಚ್ಚು ಗಮನ ಈ ಲೌಕಿಕ ವ್ಯವಹಾರಗಳಿಗೆ ಕೊಡದೆ ಇದ್ದರೆ ಸೋಜಿಗವಿಲ್ಲ. ಮುಂದಿನ ಊರಿಗೆ ಹೊರಟ ಯಾತ್ರಿಕರು ಧರ್ಮಸಾಲೆಯಲ್ಲಿ ತಂಗುವಂತೆ, ನಮ್ಮವರ ಈ ಲೋಕದ ಜೀವನ ಯಾತ್ರೆ; ಇಲ್ಲಿಯ ಇರುವು. ಹೊಟ್ಟೆ ಕೇಳುವುದಿಲ್ಲ—ಅದಕ್ಕಾಗಿ ಹೇಗೊ ದುಡಿಯುವುದು; ಜೀವ ಕೇಳುವುದಿಲ್ಲ—ಅಂತೂ ಮದುವೆಯಾಗುವುದು; ಮದುವೆಯಾದ ತಪ್ಪಿಗೆ - ಮಕ್ಕಳು ಗಂಟು ಬೀಳುವುವು ಅಷ್ಟರೊಳಗೆ ಈ ಮಾಯಾ ಸಂಸಾರದೊಳಗಿಂದ ಅಥವಾ ಸಂಸಾರ ಮಾಯೆಯೊಳಗಿಂದ ಒಮ್ಮೆ ಪಾರಾಗಿ ಮುಕ್ತಿಯ ದಾರಿಯನ್ನು ಹಿಡಿವ ಅವಸರವೇ ಅವಸರ ! 'ಸಮಾಜ' ಎಂಬುದರ ಅವಶ್ಯಕತೆ ನಮ್ಮ ಜೀವನದ ದಾರಿಯಲ್ಲಿ ಎಲ್ಲಿಯಾದರೂ ಉಂಟೆ ? ಈ ಕಾರಣದಿಂದಲೆ

ಭಾರತೀಯ ಸಮಾಜ ಅಥವಾ ಹಿಂದೂ ಸಮಾಜವೆಂಬುದು ಕೂಡ ಇನ್ನೂ ಬಾಲ್ಯಾವಸ್ಥೆಯನ್ನು ಮೀರಿ ಮುಂದೆ ಬೆಳೆದಿಲ್ಲ

ಸಮಾಜ ಮತ್ತು (ಜಾತಿ) ಧರ್ಮದ ಕಲ್ಪನೆಗಳು ಒಂದರೊಳಗೊಂದು ಬೆರೆತುಕೊಂಡೇ ಬೆಳೆದು ಬಂದುದರಿಂದ ಈಗಿನ ಕಾಲಕ್ಕೆ ಲಾಭಕ್ಕಿಂತ ಹಾನಿಯೇ ಹೆಚ್ಚಾಗಿದೆ. ಕಾಶ್ಮೀರದಿಂದ ರಾಮೇಶ್ವರದ ವರೆಗೆ ಪ್ರವಾಸ ಮಾಡುವ ಸಂಪ್ರದಾಯ ಬಹಳ ಪೂರ್ವಕಾಲದಿಂದಲೂ ಕಂಡು ಬರುವುದು ಆದರೆ ಅದು ಯಾತಕ್ಕಾಗಿ ? ಕೈಲಾಸದ ಆಶೆಯಿಂದ; ಸಾಮಾಜಿಕ ಕಾರ್ಯಕ್ಕಾಗಿ ಅಲ್ಲ. ಗುಡಿ-ಗುಂಡಾರಗಳನ್ನು ಕಟ್ಟಿ, ಛತ್ರಗಳನ್ನಿಟ್ಟು ಅಗಣಿತ ದಾನಕೊಟ್ಟವರುಂಟು; ಈಗಲೂ ಅನ್ನದಾನಿಗಳೆನಿಸಿ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸುತ್ತಿದ್ದಾರೆ. ಯಾತಕ್ಕಾಗಿ ? ತಮ್ಮ ಜಾತಿಯವರ ಸಲುವಾಗಿ – (ಭಾರತೀಯ) ಸಮಾಜಕ್ಕಾಗಿ ಅಲ್ಲ.

ಕುಟುಂಬ→ಸಮಾಜ→(ದೇಶ)→ಮಾನವ್ಯ.

ಇಂತಿದು ಇಲ್ಲಿಯ ಬಾಳಿನ ನೇರವಾದ ದಾರಿ. ಆದರೆ,

ಸತ್ತ ಮೇಲಿನ ಸ್ವರ್ಗ, (ಮೋಕ್ಷ, ಕೈಲಾಸ ಅಥವಾ ವೈಕುಂಠ)



ಕುಟುಂಬ→ಜಾತಿ (ಧರ್ಮ)

ಹೀಗೆ ಜಾತಿಧರ್ಮದಿಂದ ಥಕ್ಕನೆ ಸ್ವರ್ಗದ ಲೆಕ್ಕವೇ. ಆ ದಾರಿಯಿಂದ ಹೊರಟಲ್ಲಿ ದೇಶ, ಸಮಾಜ ; ಇವಾವುವೂ ಸಾಲವಾಗಿ ಸಿಕ್ಕುವುದಿಲ್ಲ. ಭಾರತದ (ಅಥವಾ ಮಾನವ ಕುಟುಂಬದ) ಹೊಟ್ಟೆಯಲ್ಲಿ ಹಲವು ಜಾತಿ (ಧರ್ಮ)ಗಳ ಬೇರೆ ಬೇರೆ ಗಂಟೆಗಳು ಬೆಳೆದು ನಿಂತಿವೆ. ಇವುಗಳು ಪ್ರತಿಯೊಂದೂ ಸುಸಂಬದ್ಧವಾಗಿ ಏಕಜೀವವಾಗಿ ಹೊಂದಿಕೊಂಡು ಕಾರ್ಯ ಮಾಡುತ್ತಿದ್ದರೆ. ಅದೊಂದು ಮಾತೇ ಬೇರೆ, ಆದರೆ ಇವುಗಳು ಪ್ರತಿಯೊಂದೂ ಒಂದೊಂದು ಸ್ವತಂತ್ರ (ಲೋಕ) ! ಆದುದರಿಂದ ಭಾರತದಲ್ಲಿ 'ಸಮಾಜ' ಎಂಬುದು ಉಂಟೆ ? ಎಂಬ ಪ್ರಶ್ನೆ ಇನ್ನೂ ಒಂದು ಬಗೆಯಾಗಿ ತಲೆದೋರುತ್ತದೆ.

---

೨

# ಸಮಾಜ-ವಿಚಾರ

ಸಮಾಜದ ರಚನೆ ಮತ್ತು ಅದರ ಸ್ವರೂಪವನ್ನು ಕುರಿತು ಪ್ರತಿಯೊಂದು ಸ್ವತಂತ್ರ ರಾಷ್ಟ್ರದಲ್ಲಿಯೂ ಅಲ್ಲಿಯ ವಿದ್ವಾಂಸರು ತುಂಬ ಆಳವಾದ ಅಭ್ಯಾಸಮಾಡಿ ಗ್ರಂಥಗಳನ್ನು ಪ್ರಕಟಿಸುತ್ತಿದ್ದಾರೆ. ಅವೆಲ್ಲವುಗಳ ಸಾರವು ನಮ್ಮ ಭಾಷೆಯಲ್ಲಿ ಎಂದು ಬರುವುದೊ! ಕೆಲವೊಂದು ಸ್ಥೂಲ ಪರಿಚಯದಿಂದಲೆ 'ಈಗ ಎಂತೊ ಸಮಾಧಾನಪಟ್ಟುಕೊಳ್ಳಬೇಕಾಗಿದೆ. ನಿಜವಾಗಿ ಇದಿಷ್ಟೇ ಸಾಲದು; ಯಾರಾದರೂ ತಮ್ಮ ಹೆಚ್ಚಿನ ಅಭ್ಯಾಸ, ಸಂಶೋಧನಗಳ ಲಾಭವನ್ನು ಜನಕ್ಕೆ ಮಾಡಿಕೊಟ್ಟರೆ, ನಾಡಿನ ವಿಚಾರ ವಿಕಾಸದ ಕಾರ್ಯಕ್ಕೆ ನೆರವಾದ ಶ್ರೇಯಸ್ಸು ಸಲ್ಲುವುದು. ಪರಿಭಾಷೆಯು ನಿಶ್ಚಿತವಾಗಿ ಗೊತ್ತಾಗುವ ವರೆಗೆ ಇದರ ಶಾಸ್ತ್ರೀಯ ವಿವೇಚನವು ಅಷ್ಟು ಸಮಾಧಾನಕರವಾಗಿ, ವಿಸ್ತೃತವಾಗಿ ಆಗುವುದು ತೊಂದರೆಯದಾಗಿದೆ. ಸಮಾಜದೊಳಗಣ ಪಂಗಡಗಳನ್ನು ಹಲವರು ಹಲವು ತೆರನಾಗಿ ವರ್ಗೀಕರಿಸಿದ್ದಾರೆ. ಸಮಾಜದ ವಿಸ್ತಾರವು ಬಹಳ ಸೂಕ್ಷ್ಮ ಮತ್ತು ಗಹನವಾಗಿರುವುದರಿಂದ ಎಲ್ಲವನ್ನೂ ಸಮರ್ಪಕವಾಗಿ ಅಳವಡಿಸಿ ಹೇಳುವುದಕ್ಕೆ ತೊಂದರೆಗಳಿವೆ. ಆದರೂ ಸ್ಥೂಲವಾಗಿ ಎರಡು ದೊಡ್ಡ ಗುಂಪುಗಳನ್ನು ಮಾಡಿ ಕೆಲವನ್ನು ಸಂಸ್ಥೆಗಳೆಂದೂ ಕೆಲವನ್ನು ಸಂಘ ಸಮಿತಿಗಳೆಂದೂ ಕರೆಯಬಹುದು.

ಸಂಸ್ಥೆಗಳೆಂದರೆ, ತಲೆಮಾರಿನಿಂದ ತಲೆಮಾರಿಗೆ ಸ್ಥಿರವಾಗಿ ಉಳಿದು ಕೊಂಡು ಬಂದುವು. ಉದಾಹರಣಾರ್ಥವಾಗಿ ವಿವಾಹ ಸಂಸ್ಥೆ; ಜಾತಿ-ಸಂಸ್ಥೆ; ಮುಂ.

ಸಂಘ ಸಮಿತಿಗಳೆಂದರೆ, ಯಾವುದೊಂದು ವಿಶಿಷ್ಟ ಉದ್ದೇಶವನ್ನು ಇಟ್ಟುಕೊಂಡು ಅದರ ಸಾಧನೆಗಾಗಿ ರಚಿಸಿದುವುಗಳು.

ಕುಟುಂಬವು ಸ್ವಾಭಾವಿಕವಾದುದು. ಹೃದಯಬಂಧನವು ಅದರ ಸ್ಥಿರತೆಗೆ ಕಾರಣವಾಗಿರುತ್ತದೆ. ಎಲ್ಲರಿಗೂ ಸಾಮಾನ್ಯವಾದ ಒಂದು ಸಂಕಲ್ಪವು ಅದರ ಜೀವನದ ಆಳದಲ್ಲಿ ಹುದುಗಿದ್ದುದು ಗೋಚರವಾಗುತ್ತದೆ. ಅದಕ್ಕೊಂದು ತನ್ನದೇ ಆದ ವಾತಾವರಣವಿರುತ್ತದೆ.

ಆದರೆ ಸಮಿತಿಯು ಕೃತ್ರಿಮ. ಯಾವುದೊ ಮಾತನ್ನು ನೆನೆದು ಅಥವಾ ಒಂದು ಗುರಿಯನ್ನಿಟ್ಟುಕೊಂಡು ಕೂಡಿದ ಗುಂಪು ಇದು. ಉದ್ದೇಶಪೂರ್ವಕವಾಗಿ ಸೇರುವುದುಂಟು. ಧ್ಯೇಯ ಸಾಧನೆಗಾಗಿ, ಬುದ್ಧಿಪುರಸ್ಸರವಾಗಿ ನಿರ್ಣಯಗಳನ್ನು ಕೈಕೊಂಡು ಕೆಲಸಕ್ಕೆ ತೊಡಗುವುದು ವಾಡಿಕೆ. ಕುಟುಂಬವು ಸಜೀವ ವ್ಯಕ್ತಿಯಂತೆ; ಸಹಜ-ಸ್ವಾಭಾವಿಕ ರೀತಿಯಲ್ಲಿ ಅಂತಃಪ್ರೇರಣೆಯಿಂದಲೆ ಕಾರ್ಯಪ್ರವೃತ್ತವಾಗುವುದು ವಾಡಿಕೆ. ಸಮಿತಿಯು ಯಾಂತ್ರಿಕ. ಅಲ್ಲಿ ಸಹಜತೆ ಕಡಿಮೆ; ಹಕ್ಕುಬಾಧ್ಯತೆಗಳ ಆಸಕ್ತಿ–ಆಕಾಂಕ್ಷೆಗಳು ಜನರನ್ನು ಎಳೆದು ತರುವುವು. ಇಲ್ಲಿ ತಮ್ಮದನ್ನು ಸಾಧಿಸಲು ಈರ್ಷೆ–ಸ್ಪರ್ಧೆಗಳಿಂದ ವ್ಯಾಪಾರ, ಹೋರಾಟ ನಡೆಯುವುದು.

ಕುಟುಂಬ ಮತ್ತು ಸಂಸ್ಥೆಗಳು ಒಂದು ನಾಡಿನ ದೃಷ್ಟಿಕೋನವನ್ನು ಸೂಚಿಸುವುವು; ಸಮಿತಿಗಳು ಆ ನಾಡಿನ ಆಕಾಂಕ್ಷೆ–ಆಸಕ್ತಿಯು ಯಾತರಲ್ಲಿ ಎಂಬುದನ್ನು ಧ್ವನಿತಮಾಡುವುವು.

ಎಲ್ಲರಿಗೂ ಸಮಾನ–ಸಾಮಾನ್ಯ ಆಸಕ್ತಿಯಿದ್ದಲ್ಲಿಯೆ ಸಮಾಜವು ಭದ್ರವಾಗಿ ಉಳಿಯಬಲ್ಲದು. ಒಂದೊಂದು ಪಂಗಡದ ಭಿನ್ನಭಿನ್ನ ಆಸಕ್ತಿಗಳಿದ್ದಲ್ಲಿ ಸಾಮಾನ್ಯ ಸಂಕಲ್ಪವು ನಿಷ್ಪನ್ನವಾಗಲಾರದು. ಸಾಮಾನ್ಯ ಸಂಕಲ್ಪ ಅಥವಾ ಕ್ರತುಶಕ್ತಿಯು ಇಲ್ಲದ ಜನಗಳ ಗುಂಪು ನೆರವಿಯಲ್ಲದೆ ಸಮಾಜವಲ್ಲ, ಮೇಲ್ಕಾಣಿಸಿದ ಎಲ್ಲ ಅಂದದ ಪಂಗಡಗಳನ್ನೂ ಒಳಗೊಂಡ ಸಮ್ಯಕ್ ರೂಪಕ್ಕೇ ಸಮಾಜವೆಂಬ ಹೆಸರು. ಇದರೊಳಗಿನ ಯಾವುದೊಂದು ಅಂಶವು ಅಥವಾ ಅಂಗವು (ಇಡೀ) ಸಮಾಜವೆಂಬ ಹೆಸರಿಗೆ ಅನರ್ಹವಾಗಿದೆ.

ಸಮಾಜವನ್ನು ಇನ್ನೂ ಒಂದು ಅಂದದಿಂದ ವರ್ಗೀಕರಿಸುವುದುಂಟು.

ಸಮಾಜಮಂದಿರ

## ಗುಂಪುಗಳು

### ಪ್ರತ್ಯಕ್ಷ ಸ್ಥೂಲ (ವೈಯಕ್ತಿಕ) ಸಂಬಂಧ ಬರುವಂತಹವು

- ಬಳಗದಂತಹ ಸ್ಥಿರರೂಪದ ಸಂಬಂಧ ಉದಾ: ಮನೆತನ, ನೆರೆಹೊರೆಯ ಆಪ್ತ ಬಾಂಧವ್ಯದಂತಹ ಪ್ರಾಥಮಿಕ ಕೌಟುಂಬಿಕ ಸಂಬಂಧಗಳು.
- ತಾತ್ಕಾಲಿಕ ಸಂಬಂಧ ಉದಾ: ಸಂತೆ, ಜಾತ್ರೆ, ಯಾತ್ರೆ, ಪ್ರವಾಸ, ಅಥವಾ ಏನೊಂದು ನಿಮಿತ್ತದಿಂದ ಸೇರಿದ ಗುಂಪುಗಳಲ್ಲಿ ಬರುವ ಸಂಬಂಧ.

### ಅಪ್ರತ್ಯಕ್ಷ ಅಥವಾ ಸೂಕ್ಷ್ಮ ಸಂಬಂಧವುಳ್ಳವು

- ಮೇಲುಮಟ್ಟದ ಬಾಳಿನಲ್ಲಿ ಉಂಟಾಗುವ ಸ್ಥಿರರೂಪದ ಸಂಬಂಧ. ಉದಾ: ನಾಗರಿಕ, ರಾಷ್ಟ್ರೀಯ, ಸಾಂಸ್ಕೃತಿಕ, ರಾಜಕೀಯ ಕುಟುಂಬ ಸಂಬಂಧಗಳು.
- ವಿಶಿಷ್ಟ ಕಾರ್ಯ ಅಥವಾ ಕಾರಣಗಳಿಗಾಗಿ ಬರುವ ಸಂಬಂಧ. ಉದಾ: ಶೈಕ್ಷಣಿಕ, ಆರ್ಥಿಕ, ಔದ್ಯೋಗಿಕ, ಕಲಾ ಸಮಿತಿಗಳ ಮೂಲಕ ಉಂಟಾಗುವ ಸಂಬಂಧಗಳು.

## ಇನ್ನೂ ಕೆಲವು ಗುಂಪುಗಳೆನಿಸಬಹುದಾದ ವರ್ಗಗಳು

'ಸಾರ್ವಜನಿಕರು'; '(ಊರ) ಹಿರಿಯರು'; 'ದೈವದವರು'; ಆಟಪಾಟ ಅಥವಾ ಸಮಾಜ ಸುಧಾರಣೆಗಳಂತಹ ನಿಮಿತ್ತದ ಎಲ್ಲರಿಗೂ ಸಾಮಾನ್ಯ ಆಸಕ್ತಿಯಿರುವ ಗುಂಪುಗಳು : 'ಆಟಗಾರರು', 'ಸುಧಾರಕರು', 'ಸನಾತನಿಗಳು' ಮುಂತಾದವುಗಳು.

## ಬಾಹ್ಯಕಾರಣದಿಂದ ಉಂಟಾದ ವರ್ಗಗಳು ಅಥವಾ ವಿಭಾಗಗಳು

ಬಂಡವಾಳಗಾರಿಕೆ, ಜಮೀನ್ದಾರಿ; ಜಹಗೀರದಾರಿ, ಸಂಸ್ಥಾನಿ; ಅಥವಾ ಸಾಂಸ್ಕೃತಿಕ (ಇಸ್ಲಾಂ, ಬೌದ್ಧ, ಕ್ರಿಸ್ತಿ ಮುಂತಾದ) ಪ್ರದೇಶಗಳು.

ಇವೆಲ್ಲ ವರ್ಗಗಳ ಜನಗಳ ವ್ಯವಹಾರ, ಸಂಬಂಧಗಳು ಹಾಸು ಹೊಕ್ಕಾಗಿ ನಡುವೆ ಯಾವ ಉಕ್ಕಿನ ಗೋಡೆಗಳ ತಡೆಯಿಲ್ಲದೆ ನಡೆಯುತ್ತಿದ್ದರೆ ಮಾತ್ರ ಆ ಸಮಾಜವು ಸಜೀವವಾಗಿದ್ದುಕೊಂಡು ಬಾಳಬಲ್ಲದು; ಬೆಳೆಯಬಲ್ಲದು. ದೇಹದೊಳಗಿನ ರಕ್ತಸಂಚಲನವು ಅಂಗಾಂಗಗಳಲ್ಲಿ ಆಗುತ್ತಿದ್ದರೇ ಆ ಶರೀರದಲ್ಲಿ ಪ್ರಾಣವು ಉಳಿದು ಜೀವನ ವ್ಯಾಪಾರವು ನಡೆಯುವುದು. ಒಂದೊಂದು ಪಂಗಡಗಳ ವ್ಯವಹಾರಗಳು ಆಯಾ ಪಂಗಡಗಳ ಮಟ್ಟಿಗೇ ಉಳಿದಲ್ಲಿ, ಅಂಗಾಂಗಗಳ ಜೀವಂತ ಸಂಬಂಧವು ತಪ್ಪಿ ಹೋದಂತೆಯೇ ಸರಿ. ಧಾರ್ಮಿಕ ಪಂಗಡಗಳು, ಜನ್ಮದಿಂದ ಬಂದ ಜಾತಿಗಳು, ರಾಜಕೀಯ ಪಕ್ಷಗಳು, ಆರ್ಥಿಕ–ಔದ್ಯೋಗಿಕ ವರ್ಗಗಳು, ಕಲಾವಂತರ ತಂಡ, ಇವೆಲ್ಲ ಸ್ವತಂತ್ರ ಲೋಕಗಳೇ ಆಗಿರುವ ಪ್ರದೇಶವು ರಾಷ್ಟ್ರವಾಗಿ ತಲೆಯೆತ್ತಿ ಮೆರೆಯಲು ಸಾಧ್ಯವಿಲ್ಲ. ಒಂದು ಕುಟುಂಬವಾಗಲು ಇರುವ ಅಡ್ಡಿ ಆತಂಕಗಳು ದೂರವಾಗದೆ ಜೀವಂತ ಸಮಾಜವು ನಿರ್ಮಾಣವಾಗಲಾರದು; ಜೀವಂತ ಸಮಾಜವು ಇಲ್ಲದ ರಾಷ್ಟ್ರವು ಭೌಗೋಲಿಕ ಪ್ರದೇಶವೆ ಹೊರತು ಪ್ರತ್ಯಕ್ಷ ರಾಷ್ಟ್ರವೆಂಬ ಗೌರವಕ್ಕೆ ಅಪಾತ್ರವೆಂದು ಸಿದ್ಧವಾಗಲು ಬಹಳ ಕಾಲ ಬೇಕಾಗಿಲ್ಲ.

ಸಮಾಜ ಸ್ವಾಸ್ಥ್ಯವು ಕೆಡಬಾರದಾಗಿದ್ದರೆ, ಸಮಾಜದೊಳಗಿನ ಪ್ರತಿಯೊಂದು ವ್ಯಕ್ತಿಗೂ ತನ್ನ ಇಷ್ಟದಂತೆ ತನ್ನ ಏಳ್ಗೆಯನ್ನು ಮಾಡಿಕೊಂಬ ಸ್ವಾತಂತ್ರ್ಯವಿರಬೇಕು. ಜನ್ಮಮೂಲಕ ಅಥವಾ ಸಂಪತ್ತಿನ ಮೂಲಕ ಯಾವ ತೊಡಕು ತೊಂದರೆಗಳನ್ನೂ ಒಡ್ಡಲಾಗದು. ಗುಣಕ್ಕೇ ಮನ್ನಣೆಯಿರಬೇಕು. ಅಸ್ವಾಭಾವಿಕವಾದ ವಿಶೇಷ ಹಕ್ಕುಗಳನ್ನು ಪಡೆದುಕೊಂಡ ಪಂಗಡಗಳು ಉಳಿದ ವರ್ಗಗಳ ಅಸೂಯೆಗೆ ಆಮಂತ್ರಣ ಕೊಡುತ್ತವೆ.

ಸಮಾಜವು ತನ್ನದೇ ಆದ ಒಂದು ವಿಶಿಷ್ಟ ವಾತಾವರಣವನ್ನು ನಿರ್ಮಿಸಿಕೊಂಡಿರುತ್ತದೆ. ಸಮಾಜದೊಳಗಿನ ಒಂದೊಂದು ವರ್ಗ, ಸಂಸ್ಥೆ, ಸಮಿತಿಗಳೂ ಈ ವಾತಾವರಣ ನಿರ್ಮಾಣಕ್ಕೆ ಪೋಷಕವಾಗಿರುತ್ತವೆ. ರೂಢಿ, ಸಂಪ್ರದಾಯಗಳು, ನೈತಿಕ ಕಲ್ಪನೆಗಳು, ಧಾರ್ಮಿಕ ವಿಚಾರಗಳು ಪುರಾಣ ಕತೆಗಳು, ಕಲಾ-ಸಾಹಿತ್ಯ, ಶಾಸ್ತ್ರ, ಇಂತಿವೆಲ್ಲವೂ—ಇವು ಯಾವುದೇ ಪಂಗಡ, ಪಕ್ಷ, ಪಂಥದುವು ಇದ್ದರೂ ಅವೆಲ್ಲವು ಏಕಮುಖವಾಗಿ ಸಾಮಾಜಿಕ ಒಟ್ಟಿನ ವಾತಾವರಣದ ಏಕತಾನತೆಗೆ ಸಹಕಾರಿಯಾಗಿರಬೇಕಲ್ಲದೆ ಪರಸ್ಪರ ವಿರೋಧಕ, ಮಾರಕವಾಗಿರಬಾರದು. ಹಿಂದೂ-ಇಸ್ಲಾಮದ ಮತವಿಚಾರ, ನಾರಸಿಂಹ-ಶರಭಾವತಾರದ ಕಥೆಗಳು, ವೈದಿಕ-ಬೌದ್ಧಾದಿಗಳ ದೃಷ್ಟಿಕೋನ ಇಂತಹ ಹಾವು-ಮುಂಗಲಿಗಳ ಮನೋಭಾವವು ವ್ಯಕ್ತವಾಗುತ್ತಲಿದ್ದ ಈ ವರೆಗಿನ ಈ ಹಿನ್ನೆಲೆಯಲ್ಲಿ ಅಖಂಡ, ಅವಿಭಾಜ್ಯ, ಏಕಜೀವ ಒಂದು ಸಮಾಜವು ತಲೆಯೆತ್ತುವುದು ಹೇಗೆ ತಾನೆ ಸಾಧ್ಯ ? ಒಂದು ಕುಟುಂಬವಾಗಿ ಬೆಳೆಯಲು ಅಡ್ಡಬರುವ ನಡುವಿನ ಎಲ್ಲ ಅಡೆತಡೆಗಳನ್ನೂ ನಿರ್ಮೂಲಗೊಳಿಸದೆ ಯಾವ ಜನವೂ ಒಂದು ಸಮಾಜವೆಂಬ ಮರ್ಯಾದೆಗೆ ತಕ್ಕುದಾಗಲಾರದು. ಒಂದು ಕುಟುಂಬವಾಗಿ ವಿಕಾಸವಾಗಲು ಪಚನವಾಗದೆ ಉಳಿದ ಪಕ್ಷ, ಪಂಗಡ-ಜನವು 'ಸಲ್ಲ'; ಅದು ಒಡಲಲ್ಲಿ ಬೆಳೆವ ಗಂಟು. ಶಸ್ತ್ರಕ್ರಿಯೆಯಿಂದ ಅದನ್ನು ಕತ್ತರಿಸಿಯಾದರೂ ಹೊರದೆಗೆಯಬೇಕು. ಇಲ್ಲವೆ ಅರಗಿಸಿಕೊಳ್ಳಲು

ಅವಶ್ಯಕವಾದ ಔಷಧೋಪಚಾರಗಳನ್ನಾದರೂ ಕೂಡಲೆ ಕೈಕೊಳ್ಳಬೇಕು. ದುರ್ಲಕ್ಷ ಮಾಡಿದರೆ ಆರಂಭದಲ್ಲಿ ಉಗುರಿನಿಂದ ಹೋಗುವುದಕ್ಕೆ ಶಸ್ತ್ರವನ್ನು ಉಪಯೋಗಿಸುವ ಪ್ರಸಂಗವು ಬರುವುದು. ಇಲ್ಲವಾದರೆ ಅದು ಜೀವದ ಮೇಲಣ ಗಂಡಾಂತರವಾಗುವುದು ನಿಶ್ಚಿತ.

ಸಮಾಜದ ಕಲ್ಪನೆಯು ಮಾನವರಿಗೆ ಅತಿಪುರಾತನ ಕಾಲದಿಂದಲೇ ಹೊಳೆದಿದ್ದರೂ ಶಾಸ್ತ್ರೀಯ ಪದ್ಧತಿಯಿಂದ ಅದರ ಆಳವಾದ ಸಂಶೋಧನೆ ಮತ್ತು ಅಭ್ಯಾಸಕ್ಕೆ ಆರಂಭವಾಗಿ ಬಹಳ ಕಾಲವು ಸಂದಿಲ್ಲ. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಈ ಶಾಸ್ತ್ರವು ತಲೆದೋರಿತೆನ್ನಬಹುದು. ಇದರ ಉಗಮವು ಮೊದಲು ಫ್ರಾನ್ಸದಲ್ಲಾಯಿತು. ಇಂಗ್ಲಿಷ ಜರ್ಮನ್ ಧೀಮಂತರು ಈ ಶಾಸ್ತ್ರದ ವಿಕಾಸಕ್ಕೆ ನೆರವಾದರು. ಈಗ ಅಮೇರಿಕೆಯಲ್ಲಿ ಈ ವಿಷಯದ ವಿಶೇಷ ಆಸ್ಥೆಯು ಕಂಡುಬರುತ್ತದೆ.

ಈ ವಿಷಯವು 'ಶಾಸ್ತ್ರ'ವೇ ಎಂಬ ಬಗೆಗೆ ಹಲವರು ಸಂದೇಹಪಟ್ಟುಕೊಂಡು ಆಯ್ತು. ಈಗ ಸಮಾಜ ಶಾಸ್ತ್ರದ ಅಧಿಕಾರವನ್ನು ಒಪ್ಪಿಕೊಂಡರೂ ಇದರ ಕ್ಷೇತ್ರವು ಎಷ್ಟು ಎಂಬ ಬಗೆಗೆ ವಾದವಿದೆ. ಸಮಾಜ ಶಾಸ್ತ್ರವು ಬಳಸಿಕೊಳ್ಳದ ಅಥವಾ ಸಮಾಜ ಶಾಸ್ತ್ರದೊಡನೆ ಸಂಬಂಧಬಾರದ ಶಾಸ್ತ್ರವಿಲ್ಲ. ಮನುಷ್ಯಶಾಸ್ತ್ರವು (Anthropology) ಬೆಳಕುಕೊಡದಿದ್ದರೆ ಸಮಾಜಶಾಸ್ತ್ರದ ಪ್ರಗತಿಯೇ ಸಾಧ್ಯವಿದ್ದಿಲ್ಲ. ಇತಿಹಾಸ-ಭೂಗೋಲಗಳಂತೂ ಮುಖ್ಯಾಧಾರ. ಮನುಷ್ಯ ಶಾಸ್ತ್ರವು ಕೈಬಿಟ್ಟೊಡನೆ ಇತಿಹಾಸದ ನೆರವನ್ನು ಕೋರಬೇಕಾಗುವದು. ಪುರಾಣಕತೆ, ಲೋಕಕಥೆ, ಲೋಕಗೀತ, ಭಾಷಾಶಾಸ್ತ್ರ, ಧರ್ಮಶಾಸ್ತ್ರ, ನೀತಿಶಾಸ್ತ್ರ, ತತ್ವಜ್ಞಾನಗಳ ನೆರವಂತೂ ಸರಿಯೆ; ಭೌತಶಾಸ್ತ್ರದ ಸಿದ್ಧಾಂತಗಳ ಉಪಕಾರಗಳೂ ಅಷ್ಟಿಷ್ಟಲ್ಲ. ಡಾರ್ವಿನನ ವಿಕಾಸವಾದವು ಸಮಾಜ ಶಾಸ್ತ್ರದ ವಿಕಾಸಕ್ಕೂ ಕಾರಣವಾಗಿದೆ. ಐನ್ಸಟಿನ್‌ನ ಸಾಪೇಕ್ಷ ಸಿದ್ಧಾಂತದ ಪರಿಣಾಮಗಳೂ ಮಹತ್ವದುವುಗಳಾಗಿವೆ. ಜೀವನ ರೀತಿಯ ಮೇಲೆ ಪರಿಣಾಮ ಮಾಡುವ ಪ್ರತಿಯೊಂದು ಹೊಸ ಸಂಶೋಧನವೂ ಸಮಾಜ ಶಾಸ್ತ್ರಕ್ಕೆ ತನ್ನನ್ನು ಲೆಕ್ಕಿಸಲು ಬಂದು ವರದಿಯನ್ನು ಕೊಡುತ್ತದೆ. ಇವಲ್ಲದೆ ಇತ್ತೀಚೆಗೆ ಅರ್ಥಶಾಸ್ತ್ರವೇ ಸಮಾಜ ಶಾಸ್ತ್ರದ ಮುಖ್ಯಾಂಗವಾದಂತಾಗಿತ್ತು. ಆದರೆ ಮಾನಸ ಶಾಸ್ತ್ರದ ಆಗಮನದಿಂದ

ಅರ್ಥಶಾಸ್ತ್ರದ ಮಹತ್ವವು ಪೂರ್ಣ ಕಡಿಮೆಯಾಗದಾದರೂ ಅದರ ಹೆಮ್ಮೆ ಸ್ವಲ್ಪ ಕುಗ್ಗಿದಂತಾಗಿದೆ. ಮಾನವನು ಮನಸಿನ ಕೈಬೊಂಬೆ. ಆದುದರಿಂದ ಮಾನಸ ಶಾಸ್ತ್ರಕ್ಕೆ ಇರುವ ಗೌರವವೇ ಅದೊಂದು ಬೇರೆ.

ಸಮಾಜದ ಭದ್ರತೆಯ ಉಪಾಯಗಳನ್ನು ಕಂಡುಹಿಡಿವ ಹಲವಾರು ಪ್ರಯತ್ನಗಳಾಗಿವೆ ಅವೆಲ್ಲವುಗಳ ಇತಿಹಾಸವು ಸ್ವತಂತ್ರವಾದ ಒಂದು ಮನೋರಂಜಕ ಗ್ರಂಥವೆ ಆದೀತು ಮನುಷ್ಯನು ಸ್ವಾರ್ಥಪರಾಯಣನು. ಆತನ ಸ್ವಾರ್ಥೀಭಾವವೇ ಎಲ್ಲ ದುಃಖಗಳಿಗೂ ಮೂಲ; ಸ್ವಾರ್ಥದ ತ್ಯಾಗ ಮಾಡಿ ಪಾರಲೌಕಿಕ ದೃಷ್ಟಿಯವನಾದರೆ ಸಮಾಜದಲ್ಲಿ ಸುಖ-ಶಾಂತಿಗಳು ನೆಲೆಸುವವು, ಎಂಬ ವಿಚಾರವು ಲೋಕವನ್ನು ಹಲವು ದಿನಗಳ ವರೆಗೆ ಆಳಿತು. ಆಹಾರ-ನಿದ್ರಾ-ಭಯ-ಮೈಥುನಗಳು ಪಶುವಿಗೂ ಉಂಟು; ಮನುಷ್ಯನಿಗೂ ಉಂಟು. ಮನುಷ್ಯನ ಮಹಿಮೆ ಯಾತರಲ್ಲಿ ? ಇವನ್ನು ಅಲ್ಲಗಳೆವಲ್ಲಿ ತಾನೆ ? ಈ ಅತಿವಾದವು ತಲೆಗೇರಿ ಉಪವಾಸದ ಮಹಾತ್ಮ್ಯ ಬಂತು. ಶಾರೀರಿಕ ಕಷ್ಟಗಳನ್ನು ಅನುಭವಿಸುವುದು, ಮುಳ್ಳುಹಾಸಿಗೆಯ ಮೇಲೆ ಮಲಗುವುದು ಮೊದಲಾದ ಪ್ರಕಾರಗಳು ಪ್ರಶಸ್ತವೆಂದು ಗ್ರಹಿಕೆ ಯಾಯ್ತು. ನಾರಿಯೆ ಹೆಮ್ಮಾರಿ. ಸಂಸಾರ ಮಾಯಾಪಾಶಗಳ ಮೂಲ ಸ್ಥಾನ ಅದರಿಂದ ಭಿಕ್ಷು—ಭಿಕ್ಷುಣಿಗಳ ಯೋಗ-ಯೋಗಿನಿಯರುಗಳ ಸಂತಾನವು ಅಭಿವೃದ್ಧಿಗೆ ಬಂದಿತು.

ತನ್ನ ಮೇರೆ ಮೀರಿ ಪಾರಲೌಕಿಕಭಾವನೆಯೂ ಅಸ್ವಾಭಾವಿಕವಾಗಿ ಜನರನ್ನು ಬಿಗಿಹಿಡಿದು ಇಡಲಾರದು. ಧರ್ಮದ ಹೆಸರಿನಲ್ಲಿಯೆ ಅಧಾರ್ಮಿಕ, ಅನೀತಿಯ ಕೃತ್ಯಗಳು ಆರಂಭವಾಗುವುವು ಎಂಬ ಅನುಭವವು ಜನರ ಕಣ್ತೆರೆದಿತು. ಯುರೋಪಿನಲ್ಲಿ ಧಾರ್ಮಿಕ ವಿಚಾರಪಲ್ಲಟದ ಆಂದೋಲನವು ತಲೆಯೆತ್ತಿತು. ರಾಜರ ಅನ್ಯಾಯದ ಆಳಿಕೆಗೆ ಕಸಿವಿಸಿಗೊಂಡು, ಸ್ವಾತಂತ್ರ್ಯ, ಸಮತೆ, ಬಂಧುಭಾವದ ಉದ್ಘೋಷದೊಡನೆ ಫ್ರಾನ್ಸ ರಾಜ್ಯ ಕ್ರಾಂತಿಯಾಯ್ತು(೧೭೮೭).ರೂಸೊನಂತಹರ ಲೇಖನಗಳಿಂದ 'ಸಮಾಜ'ದ ವಿಚಾರವು ಪ್ರಾಮುಖ್ಯತೆಯನ್ನು ಪಡೆದಿತು. ರಾಜ್ಯ ರಾಜರಿಗಾಗಿ ಅಲ್ಲ; ಜನತೆಯ ರಾಜ್ಯ. ಜನರು ಬುದ್ಧಿಪೂರ್ವಕವಾಗಿ ತಮ್ಮ ವೈಯಕ್ತಿಕ

ಸ್ವಾತಂತ್ರ್ಯವನ್ನು ಪರಿಮಿತಗೊಳಿಸಿ 'ಸಮಾಜ'ಕ್ಕೆ ಅರ್ಪಿಸಿದ್ದಾರೆ ಆ ಸಮಾಜವು ರಾಜ್ಯದ ಒಡೆತನಕ್ಕೆ ಅಧಿಕಾರಿ. ಎಂಬೀ ತೆರನಾದ ವಿಚಾರ ಪ್ರಣಾಲಿಯು ಮುಂದೆ ಬಂದಿತು. ಹೊಸ ವಿಚಾರ ಸರಣಿಯಿಂದ ಹೊಸ ಯುಗದ ಉದಯವಾಯ್ತು.

ಭೌತಿಕ ಸಂಶೋಧನಗಳಿಂದ ವಿಚಾರಕ್ರಾಂತಿಗೆ ಇನ್ನಿಷ್ಟು ಪುಟ ದೊರೆತಿತು ಧಾರ್ಮಿಕ ವಿಚಾರ ಶೃಂಖಲೆಗಳಿಂದ ಮುಕ್ತವಾದ ವಿಚಾರ ಶಕ್ತಿಯು ತನ್ನ ಪ್ರಭಾವವನ್ನು ಬೀರಿತು. ಬುದ್ಧಿವಾದಿಗಳು ವಿವಿಧ ಜ್ಞಾನ ಶಾಖೆಗಳಲ್ಲಿ ಅಭೂತಪೂರ್ವ ಹೊಸ ಶೋಧಗಳನ್ನು ಮಾಡಿದರು. ಉಗಿಯ ಯಂತ್ರಗಳು ಆರಂಭವಾಗಿ ಔದ್ಯೋಗಿಕ ಕ್ರಾಂತಿಯಾಯ್ತು. ಸಮಾಜ ದಲ್ಲಿ ಹೊಸ ವರ್ಗಕಲಹಕ್ಕೆ ಮೊದಲಾಯ್ತು. ಸಮಾಜದ ಜುಟ್ಟುಗಳು ಸಿರಿವಂತರು, ಬಂಡವಾಳಗಾರರ ಕೈಗೆ ಬಂದುವು. ಆರ್ಥಿಕ ಪರಿಸ್ಥಿತಿಯೆ ಜೀವನಕ್ಕೆ ಮೂಲಾಧಾರವೆಂಬ ಸಿದ್ಧಾಂತವು ಮುಂದೆ ಬಂತು.

ಭೌತಶಾಸ್ತ್ರದ ಸಂಶೋಧನಗಳಿಂದ ಬುದ್ಧಿವಾದಿಗಳ ಆತ್ಮವಿಶ್ವಾಸವು ಮುಗಿಲಿಗೆ ಮುಟ್ಟಿತು. ನಿರೀಶ್ವರವಾದವು ಪ್ರಾಶಸ್ತ್ಯವನ್ನು ಪಡೆದಿತು. ಬೈಬಲ್ಲಿನಲ್ಲಿ ಹೇಳಿದ ಸೃಷ್ಟಿಯ ಉತ್ಪತ್ತಿ-ಸ್ಥಿತಿ-ಲಯಾದಿಗಳ ವಿಚಾರಗಳೆಲ್ಲ ಕೇವಲ ಕಟ್ಟು ಕತೆಗಳೆಂದು ಶಾಸ್ತ್ರೀಯ ಶೋಧಗಳಿಂದ ಮನವರಿಕೆ ಯಾಯ್ತು. ಜಿಬ್ರಾಲ್ಟರಿನ ಆಚೆಗೆ ಮುಗಿಲು ಕಡಲಿಗೆ ಅಂಟಿದೆ; ನೆಲವೇ ಇಲ್ಲವೆಂಬ ಗ್ರಹಿಕೆಯು ಕೋಲಂಬಸನ ಕಡಲಪಯಣದಿಂದ ನಿರಾಧಾರ ವೆಂದು ಸಿದ್ಧವಾಯ್ತು. ಪೃಥ್ವಿಯ ಸುತ್ತ ಸೂರ್ಯನು ತಿರುಗುತ್ತಿರುವ ನೆಂಬ ಕ್ರೈಸ್ತ ಮಠಪತಿಗಳ ಹಠವಾದವು ತಿಳಿಗೇಡಿತನದ ಪರಮಾವಧಿ ಯೆಂದು ಕಂಡುಬಂತು. ಭೌತಶಾಸ್ತ್ರಗಳ ಸಹಾಯದಿಂದ ಪ್ರತಿಸೃಷ್ಟಿಯನ್ನೇ ನಿರ್ಮಿಸಬಹುದೆಂಬ ಸ್ಫೂರ್ತಿ ಉತ್ಸಾಹಗಳು ಸಂಶೋಧಕ ವರ್ಗದಲ್ಲಿ ಉಂಟಾದುವು. ಜೀವವೂ ಭೌತಶರೀರದ ಒಂದು ಅಂಶ. ಮನಸ್ಸು ಅಥವಾ ಬುದ್ಧಿಗೆ ಸ್ವತಂತ್ರ ಸ್ಥಾನವಿಲ್ಲ. ಈ ಶರೀರದಲ್ಲಿರುವಾಗ ಎಷ್ಟು ವಿವಿಧ ಭೋಗವಿಲಾಸಾದಿ ಅನುಭವಗಳನ್ನು ಪಡೆಯಲು ಸಾಧ್ಯವೋ ಅದೆ ಒಂದು ಗುರಿ; ಎಂಬ ಈ ವಿಚಾರಕ್ಕೆ ಫ್ರಾಯಿಡನ ಮಾನಸಶಾಸ್ತ್ರದ ಸಂಶೋ-ಧನಗಳಿಂದ ಇನ್ನಿಷ್ಟು ಕಳೆಕಟ್ಟಿತು. ಲೈಂಗಿಕ ಆಕರ್ಷಣವೇ ಎಲ್ಲ

ಕರ್ಮ-ಪ್ರವೃತ್ತಿಯ ಮೂಲ. ಲೈಂಗಿಕ ಆಕಾಂಕ್ಷೆಗಳನ್ನು ಒಳಗೊಳಗೇ ದಬ್ಬಿ ಬಿಗಿದಿಡುವದರಿಂದ ಮಾನವನ ಜೀವನದಲ್ಲಿ ಕಗ್ಗತ್ತಲು ಕವಿಯುತ್ತದೆ. ಎಂಬೀ ಬಗೆಯ ವಿಚಾರಗಳ ಪ್ರಚಾರದಿಂದ ಸಂಯಮವು ಅಸ್ವಾಭಾವಿಕವಾದ ಕಾರ್ಯವೆಂಬ ಭಾವನೆಯು ಬಲಿತು ಕಾಮುಕತೆ, ವಿಲಾಸಕ್ಕೆ ಪರಮಾವಧಿ ಉಕ್ಕುಬಂತು. ಸಾಮಾಜಿಕ ಸಂಬಂಧ, ನೀತಿ ನಿಯಮಾದಿಗಳಲ್ಲಿ, ನಡೆವಳಿಗಳಲ್ಲಿ, ಉಡುಪುತೊಡಪು, ಊಟಉಡಿಗೆ ಮೊದಲಾದವುಗಳಲ್ಲಿ ಈ ದೃಷ್ಟಿಯಿಂದ ವಿಪರೀತ ಮಾರ್ಪಾಟುಗಳಾದುವು.

ಭೌತಿಕಶಾಸ್ತ್ರಗಳ ಸಹಾಯದಿಂದ ಔದ್ಯೋಗಿಕ ಕಾರಖಾನೆಗಳ ಹೊಸ ಹೊಸ ಪ್ರಕಾರಗಳು-ತಾಂತ್ರಿಕ ಶೋಧಗಳಾಗುವುವು. ಹೊಸ ತಂತ್ರಗಳ ಶೋಧಗಳ ಸಹಾಯದಿಂದ ಆರ್ಥಿಕ ಸುಸ್ಥಿತಿ ಪ್ರಾಪ್ತವಾಗುವದು ಆರ್ಥಿಕ ಸ್ಥಿತಿಯ ಮೇಲೆಯೇ ಎಲ್ಲ ಸಾಮಾಜಿಕ ಸಂಬಂಧಗಳೂ ಅವಲಂಬಿಸಿವೆ. ಎಂದು ಮಾರ್ಕ್ಸನ ಮಹಾಸಿದ್ಧಾಂತ. ಧನವೇ ಸಮಾಜದ ಅಡಿಗಲ್ಲು ಎಂದು ಮಹಾ ಗ್ರಂಥಬರೆದು ಸಿದ್ಧಮಾಡಿದನು. ಆ ಕಾಲದ ನಿರೀಶ್ವರವಾದದ ಮನಃಪ್ರವೃತ್ತಿಯು, ಆತನ ಸಿದ್ಧಾಂತವು ನಿಜವೆಂದೆನಿಸುವುದಕ್ಕೆ ಇನ್ನಿಷ್ಟು ಸಹಾಯಕವಾಯಿತು. ನಿರೀಶ್ವರವಾದದ ಹಿನ್ನೆಲೆಯಲ್ಲಿ ಆ ಸಿದ್ಧಾಂತವು ಉಜ್ವಲವಾಗಿ ಕಾಣಬಲ್ಲದು.

ನೆಪೋಲಿಯನನ ಅಳಿಗಾಲದನಂತರ ಯುರೋಪಕ್ಕೆ ಲಭಿಸಿದ ಶಾಂತಿಯ ಕಾಲದಲ್ಲಿ ೧೯೧೪ರ ವರೆಗೂ ಅದು ಐಹಿಕ ಸುಖದ ಪರಮಾವಧಿಯನ್ನು ಅನುಭವಿಸಿತು. ನಿರೀಶ್ವರವಾದೀ ಸುಖವಾದದಿಂದ ಈ ವಿಲಾಸದ ಆಸ್ವಾದನದಲ್ಲಿ ಯಾವ ಕೊರತೆಯೂ ಎನಿಸಲು ಕಾರಣವಿದ್ದಿಲ್ಲ. ಜೀವನ ಕಲಹದಲ್ಲಿ ಬಲಶಾಲಿಯಾದವನೇ ಬಾಳಬಲ್ಲನು; ಎಂಬ ಸಿದ್ಧಾಂತವು, ಡಾರ್ವಿನನ ಸಂಶೋಧನದ ನಂತರ ಯುರೋಪದ ಜೀವನ ಸೂತ್ರವಾಗಿತ್ತು. ಭೌತಿಕ ಸಂಶೋಧನಗಳ ನೆರವಿನಿಂದ ತಾಂತ್ರಿಕ ನೈಪುಣ್ಯವನ್ನು ಸಂಪಾದಿಸಿ ಬಲಶಾಲಿಯಾಗತಕ್ಕದ್ದು. ಬಲಶಾಲಿಯಾಗಿ ಸಾಮ್ರಾಜ್ಯಗಳನ್ನು ಸ್ಥಾಪಿಸಿ ಶಕ್ಯವಿದ್ದಷ್ಟು ಹೆಚ್ಚಿನದರಲ್ಲಿ ಹೆಚ್ಚಿನ ಸುಖವನ್ನು ಪಡೆಯತಕ್ಕದ್ದು ಇದು ಯುರೋಪಿಯ ರಾಷ್ಟ್ರಗಳ ಗುರಿಯಾಯ್ತು. ಆರಂಭದಲ್ಲಿ ಈ ತತ್ವಪ್ರಣಾಲಿಯೊಳಗಿನ ದೋಷವು ಯಾರ ಗಮನಕ್ಕೂ ಬರಲಿಲ್ಲ. ಬಲಿಷ್ಠರಾಗುವ

ಬಗೆಗೆ ಇಂಗ್ಲಂಡ, ಫ್ರಾನ್ಸ, ಜರ್ಮನಿ, ರಶಿಯಗಳಲ್ಲಿ ಸ್ಪರ್ಧೆ ನಡೆದಿತು. ಅದರ ಫಲವೇ ೧೯೧೪ರ ಘನಘೋರ ಸಂಗ್ರಾಮ !

ಸಮಾಜವು ಯಾವ ತತ್ವದ ಮೇಲೆ ನಿಂತಿದೆ? ಅಥವಾ ಯಾವ ತತ್ವಗಳ ಆಧಾರದ ಮೇಲೆ ನಿಂತರೆ ಲೇಸು? ಎಂಬ ಬಗೆಗೆ ನಡೆದ ಸಂಶೋಧನಗಳು ಸಾಮಾಜಿಕ ಸ್ವಾಸ್ಥ್ಯಕ್ಕೂ, ಸಮಾಜ ಸೌಖ್ಯಕ್ಕೂ ಕಾರಣವಾಗಬಲ್ಲವೆಂದು ಈ ದಾರಿಯಲ್ಲಿ ಅನೇಕ ದ್ರಷ್ಟಾರರೂ ವಿದ್ವಾಂಸರೂ ಪರಿಶ್ರಮಪಡುತ್ತಲಿದ್ದಾರೆ. ದುಡ್ಡೇ ಎಲ್ಲಕ್ಕೂ ಮೂಲ; ಬಲಶಾಲಿಯೆ ಬಾಳಬಲ್ಲ; ಎಂಬವುಗಳ ಜೊತೆಗೆ ಇನ್ನೂ ಕೆಲವು ವಿಚಾರಗಳೂ ಮುಂದೆ ಬಂದುವು. ಹುಟ್ಟಿದಾಗ ಯಾರೂ ದುಡ್ಡು, ಹೊಲ, ಮನೆ ಕಟ್ಟಿಕೊಂಡು ಬಂದಿರುವುದಿಲ್ಲ. ಸಾಯುವಾಗ ಒಯ್ಯುವುದಿಲ್ಲ. ಕೆಲವರಲ್ಲಿ ಸಂಪತ್ತು ಕೂಡಿಬಿದ್ದು ಸಮಾಜದಲ್ಲಿ ಉಳಿದವರಿಗೆ ಹೊಟ್ಟೆಗಿಲ್ಲದೆ ಬಳಲಬೇಕಾಗುತ್ತದೆ. ಆದಕಾರಣ ದೇಶದಲ್ಲಿಯ ಸಂಪತ್ತನ್ನು ಎಲ್ಲರಿಗೂ ಸಮಾನವಾಗಿ ಹಂಚಿದರೆ ಸಮಾಜ ಸ್ವಾಸ್ಥ್ಯವು ಉಳಿದು ಲೋಕವು ಸುಖಿಯಾಗುವುದು. ಎಂಬ ವಿಚಾರವು ಪ್ರಬಲವಾಗಿ ಇಂದು ಇದು ಲೋಕವನ್ನೆಲ್ಲ ಮೋಹಿಸಿದೆ. ಈ ತತ್ವಗಳು ನಿಜವಾಗಿಯೂ ಅನುಸರಣೀಯವೆಂಬಲ್ಲಿ ಸಂದೇಹವೇ ಇಲ್ಲ. ಆದರೆ ಯುರೋಪದೊಳಗಿನ ಇದರ ಮೂಲ ಪ್ರತಿಪಾದಕರೂ, ಅದರ ಇಂದಿನ ಪ್ರಚಾರಕರೂ ಮುಖ್ಯವಾಗಿ ಸಾಧನ ಶುದ್ಧಿಯ ವಿಷಯದಲ್ಲಿ ವಿವೇಕವನ್ನು ಇಟ್ಟಿಲ್ಲವಾದ್ದರಿಂದ ಈ ತತ್ವವು ಲೋಕದ ಅಶಾಂತಿಗೆ ಕಾರಣವಾಗುತ್ತಿದ್ದುದೇ ಕಂಡು ಬರುತ್ತಲಿದೆ. ಆದರೆ ಗಾಂಧಿಜೀಯವರಿಂದ ಸ್ಫೂರ್ತಿಹೊಂದಿದ ಶ್ರೀ ಜಯಪ್ರಕಾಶ ನಾರಾಯಣರ ಪಂಗಡವು ಈ ಮಾತಿಗೆ ಅಪವಾದವಾಗಿದೆ. ಸಾಧನಶುದ್ಧಿಯ ಅವಶ್ಯಕತೆಯು ಮನವರಿಕೆಯಾಗಿ ಅವರು ಈ ತತ್ವವನ್ನು ಈಗ ಸಾರಿ ಸಾರಿ ಹೇಳುತ್ತಲಿದ್ದಾರೆ.

ಜಾತಿ-ಜನಾಂಗಗಳ ಅಭ್ಯಾಸಿಗಳಲ್ಲಿ ಕೆಲವರು ಇದಕ್ಕೆ ಬೇರೆ ವಿಚಾರದತ್ತ ಸಾಗಿದ್ದು ಕಂಡು ಬರುತ್ತದೆ. ಮಾನವ ವಂಶಗಳಲ್ಲಿ ಎಲ್ಲವೂ ಸಮಾನವಾದ ಶಕ್ತಿಸಾಮರ್ಥ್ಯಗಳನ್ನು ಪಡೆದುವಾಗಿಲ್ಲ. ಕೆಲವು ತೀರ ಪ್ರಾಥಮಿಕ ಸ್ಥಿತಿಯಲ್ಲಿವೆ. ಕೆಲವು, ಕೇವಲ ಭಾವನಾಪ್ರಧಾನವಾಗಿವೆ.

ಅವರಲ್ಲಿ ವಿಚಾರ ಶಕ್ತಿಯು ಕಡಿಮೆ. ಇಂತೀ ಬಗೆಯಾದ ವಿಭೇದಗಳಿಗೆ ಎರಡು ತೆರನಾದ ಕಾರಣಗಳುಂಟು: ಮೂಲ ಬೀಜದಲ್ಲಿಯೆ ಭೇದ ವಿದ್ದುದು. ಮಂಗಗಳಿಂದ ಮನುಷ್ಯನಾದುದು ನಿಜ. ಆದರೆ ಯುರೋಪದ ಬಿಳಿ ಜನಾಂಗಕ್ಕೆ ಜನ್ಮಕೊಟ್ಟ ಮಂಗಗಳ ತಳಿಯು ಬೇರೆ; ನಿಗ್ರೋಗ ಳಂತಹ ಕುಲದ ಮೂಲ ಪುರುಷರು ಹುಟ್ಟಿದ ಮಂಗಗಳ ಜಾತಿ ಬೇರೆ. ಇದ ರಂತೆ ಆಯಾ ಜನಾಂಗಗಳು ಎಂತಹವು ಎಂಬುದು, ಅವು ವಾಸಿಸುವ ಭೂಮಿ (ಎತ್ತರವೊ, ತಗ್ಗೊ, ಪರ್ವತ ಪ್ರದೇಶವೊ, ಸಮುದ್ರ ತೀರವೊ), ಅಲ್ಲಿಯ ಹವಾಮಾನ, ಕಟಿಬಂಧ, ಮಳೆ, ಬೆಳೆವ ಸಸ್ಯಾದಿಗಳು, ಆಹಾರ ವಿಹಾರಾದಿಗಳು ಇವೇ ಮೊದಲಾದ ಸಂಗತಿಗಳನ್ನೂ ಅವಲಂಬಿಸಿರುತ್ತದೆ. ಶೀತಕಟಿಬಂಧದಲ್ಲಿ ಬೆಳೆದವರು ಬಲಿಷ್ಠರು, ಉಷ್ಣವಲಯದ ಜನರ ಶರೀರವು ದುರ್ಬಲ. ಎಂದು ಮುಂತಾದ ಕಾರಣಗಳನ್ನು ತೋರಿಸಿ ಕೆಲವು ರಾಷ್ಟ್ರದ ಜನರು ಈ ಲೋಕದಲ್ಲಿ ಒಡೆತನವನ್ನು ನಡೆಸುವುದಕ್ಕಾಗಿಯೆ ಹುಟ್ಟಿ ದ್ದಾರೆ; ಇನ್ನು ಕೆಲವು ದೇಶದ ಜನಗಳು ದಾಸರಾಗಿ ದುಡಿಯುವುದರಿಂದಲೇ ಅವರು ಬಾಳಿಬದುಕಬಲ್ಲರು; ಸೃಷ್ಟಿ ರಚನೆಯಲ್ಲಿ ಅವರಿಗೆ ಇದಕ್ಕಿಂತ ಬೇರೆಯಾದ ಸ್ಥಾನವಿಲ್ಲ; ಎಂದು ಪ್ರತಿಪಾದಿಸಿದ್ದುಂಟು.

ಈಗ ಗಣಿತಶಾಸ್ತ್ರದ ಮಹಿಮೆಯು ಬೆಳೆಯುತ್ತಲಿದೆ ಸಂಖ್ಯಾ ಶಾಸ್ತ್ರದ ಬೆಂಬಲವಿಲ್ಲದ ಯಾವ ಸಿದ್ಧಾಂತವೂ ಬಲ್ಲಿದರ ಒಪ್ಪಿಗೆಯನ್ನು ಪಡೆಯಲಾರದು. ಆಧುನಿಕ ಯಂತ್ರಯುಗವನ್ನೇ ಮೂದಲಿಸಿ ಅದರ ಮರ್ಯಾದೆಗೆ ಕೇಡುತಂದ ಖಾದಿಗೂ, ತನ್ನಿಂದಲೇ ನಿಜವಾದ ಲೋಕಕಲ್ಯಾಣವಾಗಬಲ್ಲುದೆಂದು ಸಿದ್ಧಪಡಿಸಲು ಸಂಖ್ಯಾಶಾಸ್ತ್ರದ ನೆರ ವನ್ನು ಕೋರಬೇಕಾಗುತ್ತದೆ ಸಂಖ್ಯಾಶಾಸ್ತ್ರ-ಗಣಿತಶಾಸ್ತ್ರದಲ್ಲಿ ಸಂದಿಗ್ಧತೆಗೆ ಎಡೆಯಿಲ್ಲ. ತತ್ವಜ್ಞಾನ, ತತ್ವಜ್ಞಾನಕ್ಕಿಂತಲೂ ಸಾಹಿತ್ಯ, ಸಾಹಿತ್ಯಕ್ಕಿಂತಲೂ ಸಂಗೀತ ಇವುಗಳಲ್ಲಿ ಗಣಿತದಂತೆ ನಿಶ್ಚಿತವಾದ ಗೆರೆಕೊರೆದು ಮಾತು ಇಲ್ಲ. ಅರ್ಥದಲ್ಲಿ ತರಲತೆ, ವ್ಯಂಗ್ಯ, ಧ್ವನಿ ಹೆಚ್ಚು ಹೆಚ್ಚಾಗುತ್ತ ಹೋಗುವುದು. ಬರ್ಟರಾಂಡ ರಸೆಲ್ಲನು ಮೊದಲು ತತ್ವಜ್ಞಾನದಲ್ಲಿ ಆಸಕ್ತಿಯಿದ್ದ ಸತ್ಯ ಜಿಜ್ಞಾಸುವು. ಆದರೆ ಗಣಿತದಿಂದಲೇ ಸತ್ಯದ ನಿಶ್ಚಿತ ಜ್ಞಾನವು ಸಾಧ್ಯ ವೆಂದು ಆ ಶಾಸ್ತ್ರದಲ್ಲಿ ಪ್ರವೇಶಿಸಿದನು ಕೊನೆಗೆ, ಗಣಿತದಿಂದಲೂ ಸತ್ಯದ

ನೆಲೆಹತ್ತುವುದು ಕಷ್ಟವೆಂಬ ಅನುಭವವು ಬಂದಿತೆಂದು ಒಂದೆಡೆಗೆ ಆತನು ಒಪ್ಪಿಕೊಂಡಿದ್ದಾನೆ.

ಸತ್ಯವನ್ನು ಅರಿಯಲು ಎಲ್ಲ ಶಾಸ್ತ್ರಗಳ ನೆರವೂ ಅತ್ಯಗತ್ಯ. ಆದರೆ ತಮ್ಮ ಒಂದು ಉಪಾಯದಿಂದಲೇ ಲೋಕದ ದುಃಖಗಳೆಲ್ಲ ಪರಿಹಾರ ವಾಗುವುವು. ಉಳಿದವುಗಳೆಲ್ಲ ನಿರರ್ಥಕ ಎಂದು ಹುಮ್ಮಸಗೊಂಡ ಒಂದೊಂದು ಸಿದ್ಧಾಂತದ ಅತಿವಾದಿಗಳೂ ಅವರ ಏಕಾಂತಿಕ ಭಕ್ತರೂ ತಮ್ಮ ನಡೆನುಡಿಗಳಿಂದ ಹಲಕೆಲವು ಬಾರಿ ಸಮಾಜದ ತೂಕತಪ್ಪಿಸುವು ದುಂಟು. ಸಮಾಜದೊಳಗಿನ ವೈಷಮ್ಯ-ದೋಷನಿವಾರಣೆಗೆ ಅವರಿಂದ ಆರಂಭದಲ್ಲಿ ನೆರವು ದೊರೆಯುವುದು; ಅಥವಾ ದೊರೆತಂತೆ ಸಮಾಧಾನ ಪಟ್ಟುಕೊಳ್ಳುವಷ್ಟರಲ್ಲಿ ಅವರ ವಿಚಾರ ಸರಣಿಯಲ್ಲಿ ಮೊದಲು ಅಜ್ಞಾತ ವಾಗಿದ್ದ ಕುಂದುಕೊರತೆಗಳು ಕಂಡುಬಂದಂತೆ ಆ ವಿಚಾರದ ಅತಿರೇಕದ ಭಾವನೆಯ ಉಕ್ಕು ತಗ್ಗುವುದು. ಸಮಾಜವು ಆ ವಿಚಾರವನ್ನೂ ಪಚನ ಮಾಡಿಕೊಂಡು ಮುಂದೆ ಸಾಗುವದು.

ಸಮಾಜವೆಂದರೆ ಜೀವಂತ ಜನರ ಸಂಸ್ಥೆ. ಹಿಗ್ಗು-ತಗ್ಗು ಜೀವಂತ ತನದ ಕುರುಹು. ಹಿಗ್ಗು-ಕುಗ್ಗು ಎಂದರೆ ಮಾರ್ಪಾಟ; ಬದಲಾವಣೆ-ಅದು ಏಳ್ಗೆಯಾಗಿರಬಹುದು; ಅಥವಾ ಇಳಿಗೆಯಾಗಿರಬಹುದು. ಮಾರ್ಪಾಟವು ಜೀವಂತತನದ ಸೂಚಕವಾಗಿದೆ. ಸಮಾಜವು ತಿಳಿದೊ ತಿಳಿಯ ದೆಯೊ ಯಾವಾಗಲೂ ಮಾರ್ಪಡುತ್ತಿರುವುದುಂಟು ಆದರೆ ಕೆಲರು ತಾವು (ತಮ್ಮ ಜಾತಿ ಪಂಗಡವು) ಸನಾತನವಾಗಿ ಏನೂ ಬದಲಾಗದೆ ಬಂದಿರುವೆ ವೆಂಬ ಭ್ರಾಂತಿಯಲ್ಲಿರುವರು. ಮಾರ್ಪಾಟದ ಕೆಲವು ಕಾರಣಗಳನ್ನಿಲ್ಲಿ ಅರಿತುಕೊಳ್ಳಬಹುದು.

೧ ಶಿಕ್ಷಣದಲ್ಲಿ ವ್ಯತ್ಯಾಸ :— ವೇದ, ಪುರಾಣಗಳ ಅಧ್ಯಯನ ದಿಂದ ತಮ್ಮ ಆದರ್ಶಗಳನ್ನು ಕಂಡುಕೊಂಡವರ ಬಾಳಿನ ರೀತಿಗೂ, ಪಶ್ಚಿಮ ದೇಶಗಳ ವಿಚಾರಗಳನ್ನು ಅಭ್ಯಾಸಮಾಡಿ ಜೀವನದ ಅರ್ಥವನ್ನು ತಿಳಿದುಕೊಂಡವರ ನಡೆವಳಿಯ ರೀತಿಗೂ ಹೊಂದಿಕೆಯಿಲ್ಲದ್ದನ್ನೇ ಊರೂರಿಗೂ ಕಾಣದೊರೆಯುತ್ತದೆ.

೨ **ಸುಖಜೀವನದ ಕಲ್ಪನೆ:—** ತ್ಯಾಗದಲ್ಲಿಯೇ ಸುಖವಿದೆ, ಎಂದು ನೆಮ್ಮಿದವರ ಇರುವು ಬೇರೆ; ಪ್ರತಿಯೊಂದು ಇಂದ್ರಿಯ ತೃಪ್ತಿ ಯಲ್ಲಿಯೇ ಜೀವನದ ಸೊಗಸುಂಟೆಂದು ನೆರೆನೆಮ್ಮಿದವರ ನಡೆವಳಿ ಬೇರೆ. ಒಂದೊಂದು ನೆಚ್ಚಿಕೆಯುವರ ನಡೆವಳಿ ಬೇರೆ ಬೇರೆಯಾದರೆ ಸೋಜಿಗವೇನು?

೩ **ಆರೋಗ್ಯಸಾಧನೆಯ ರೀತಿ :—** ನೈಸರ್ಗಿಕ ಉಪಚಾರ ಗಳೇ ಮಿಗಿಲೆಂದು ಭಾವಿಸಿದವರು, ಪಟ್ಟಣಿಗರ ಬಾಳಿನಿಂದ ಹೇಸಿಕೊಂಡು ದೂರವಿರುವರು; ಆಧುನಿಕ ಶಾಸ್ತ್ರೀಯ ಶೋಧಗಳ ಲಾಭ ಪಡೆದು ಆರೋಗ್ಯಸುಖ ಬಯಸುವವರು ಪಟ್ಟಣವನ್ನೇ ಹಾರಯಿಸುವರು.

೪ **ನಾಗರಿಕತೆಯ ಹೆಚ್ಚಳ:—** ಪಟ್ಟಣಗಳ ಬೆಳೆವಣಿಗೆಯೆ ಇದಕ್ಕೆ ಕಾರಣ; ರಾಜಧಾನಿಸ್ಥಾನ, ಅಥವಾ ಔದ್ಯೋಗಿಕ ಕೇಂದ್ರವಾಗಿ ಇಲ್ಲವೆ ಬೇರೊಂದು ಕಾರಣದಿಂದ ನವನಾಗರಿಕತೆಯ ಆಗರವೆನಿಸಿದ ಪಟ್ಟ-ಣಗಳ ಹೆಚ್ಚಳದಿಂದ ಸಮಾಜದ ಜೀವನ ರೀತಿಯಲ್ಲಿ ವ್ಯತ್ಯಾಸವಾಗುವುದು.

೫ **ರೂಢಿ ಪಲ್ಲಟ :—** ಮೊದಲಿನ ಜಾತಿ, ಬಗೆ, ಅಥವಾ ಕುಲ ಗಳು ಬುಡಮೇಲು ಆಗುವುದರಿಂದ ಹೊಸ ವರ್ಗಗಳು ಮೇಲಕ್ಕೆ ಬರುವವು. ಹಳಬರು ಮೂಲೆಗುಂಪಾಗುವರು.

೬ **ಪ್ರಜಾಸಂಸ್ಥೆಗಳ ನಿರ್ಮಾಣ :—** ಲೋಕ ಪ್ರಾತಿನಿಧಿಕ ಸಮಿತಿ, ಸಂಸ್ಥೆಗಳು ತಲೆಯೆತ್ತಿದಂತೆ ಹಳೆಯ ಏಕತಂತ್ರಾಧಿಕಾರದ ಸಮಿತಿ, ಸಂಸ್ಥೆಗಳು ನಿರ್ಜೀವವಾಗುವುವು; ರಾಜರ ಬದಲು 'ಜಾನಪದ' ಗಳು ಮುಂದೆ ಬರುವವು. ವಿವಾಹ ಸಂಸ್ಥೆಯ ಸ್ವರೂಪವು ಮಾರ್ಪಡು ವುದು ಸ್ವಯಂ-ವರಗಳ ಪ್ರತಿಷ್ಠೆ ಬೆಳೆಯುವುದು. ಸಂಯುಕ್ತ ಕುಟುಂಬ ಪದ್ಧತಿ, ಜಮೀನ್ದಾರಿ ಪದ್ಧತಿಗಳು ಹಿಂದೆ ಬೀಳುವುವು. ಚರ್ಚೆ, ವಿಚಾರ ವಿನಿಮಯದಿಂದ ನಿರ್ಣಯ ಮಾಡಿಕೊಳ್ಳುವ ಪ್ರವೃತ್ತಿ ಹೆಚ್ಚಿ, ಬುದ್ಧಿ-ವಾದಕ್ಕೆ ಪ್ರಾಶಸ್ತ್ಯವುಂಟಾಗುವುದು. ಸರ್ವಾಧಿಕಾರಿತ್ವ, ಏಕತಂತ್ರದ ಬಗೆಗೆ ಜುಗುಪ್ಸೆ ಹೆಚ್ಚುವುದು. ಇನ್ನೊಬ್ಬರ ಕೈಗೊಂಬೆಯಾಗಿರುವುದು ತಮ್ಮ ಮನುಷ್ಯತ್ವಕ್ಕೆ ಅಪಮಾನವೆಂಬ ಭಾವವು ಸಮಾಜದಲ್ಲಿ ಬಲಿಯುವುದು.

೭ ಸ್ವಾತಂತ್ರ್ಯೋದಯ :— ಪರದಾಸ್ಯದಲ್ಲಿರಬೇಕಾದಾಗ ಅನಿವಾರ್ಯವಾಗಿ ಬಂದ ಕೆಲವು ರೂಢಿಗಳು ಬದಲಾಗುವುವು. ದಾಸ್ಯಭಾವದ ಮಹಿಮೆ ತಗ್ಗುವುದು. ದಾಸ್ಯಭಾವದಿಂದ ಹಿಂದಕ್ಕೆ ಇದ್ದ ಲಾಭಗಳು ಈಗ ದೊರೆಯದೆ, ದಾಸನೆಂದು ಅವಮಾನಹೊಂದಬೇಕಾದುದರಿಂದ ದಾಸ್ಯತ್ವದ ಬಿರುದು ಬಿಡುವಲ್ಲಿಯೆ ಗೌರವ. 'ತವದಾಸೋऽಹಂ' ಎಂಬ ವೃತ್ತಿ ನಷ್ಟವಾಗಿ ಸ್ವಾಭಿಮಾನ ಜಾಗೃತಿಯಾಗುವುದು. ದಾಸೋऽಹದವರ ಸಮಾಜವು ಕಿರುಕುಳರದೆಂದು ಭಾವನೆಯಾಗುವುದು.

೮ ಸ್ತ್ರೀ ಸ್ವಾತಂತ್ರ್ಯ :— 'ಮನುಷ್ಯ' ಎಂದರೆ ಗಂಡಸು ಮಾತ್ರ ಎಂದೇ ಭಾವನೆ ನಡೆದುಕೊಂಡು ಬಂದಿದೆ. ಮನುಷ್ಯ'ನು' ಎಂಬಲ್ಲಿ ಅದು ಸ್ಪಷ್ಟವಾಗುತ್ತದೆ. 'ಹೆಂಗಸರಿಗೆ ಆತ್ಮವಿಲ್ಲ' ಎಂಬ ಪುರಾತನ ವಚನಗಳೂ ಉಂಟು. ಹೆಣ್ಣನ್ನು ಲೆಕ್ಕಕ್ಕೆ ಹಿಡಿಯದೆ ಈ ವರೆಗಿನ ಎಲ್ಲ ಸಮಾಜದ ರಚನೆಯಿತ್ತು. ಇನ್ನು ಹೆಣ್ಣು ತನ್ನ ಹಕ್ಕನ್ನು ಪಡೆದುಕೊಳ್ಳಲು ಮುಂದೆ ಬರುತ್ತಲೆ, ಕುಟುಂಬ ಸಂಸ್ಥೆ, ಸಾರ್ವಜನಿಕ ಸಂಸ್ಥೆ, ಸಮಿತಿಗಳ ರಚನೆಗಳಲ್ಲಿ ಬದಲಾವಣೆಯಾಗುವುದು ಅನಿವಾರ್ಯ. ಭಾಷೆಯ ರೀತಿಯಲ್ಲಿ ಕೂಡ, ಮಾರ್ಪಾಟವಾಗಲೇಬೇಕು. 'ಬಳೆ ಇಟ್ಟುಕೊಳ್ಳುವುದು' ಹೇಡಿತನದ ಲಕ್ಷಣವೆಂಬ ಪಡೆನುಡಿ ಬದಲಾಗದೆ ಇದ್ದರೆ ಹೆಣ್ಣುಮಕ್ಕಳು ಬಳೆ ಹಾಕಿಕೊಳ್ಳುವುದನ್ನು ಬಿಡುವುದಾಗಿ ಸಾರಬಹುದು!

೯ ಧಾರ್ಮಿಕ ವಿಚಾರದಲ್ಲಿ ಪರಿವರ್ತನ :— ಶಿಕ್ಷಣ, ಪ್ರವಾಸ, ಭಿನ್ನ ಧರ್ಮ-ಸಂಸ್ಕೃತಿಯ ಜನಾಂಗಗಳ ಸಂಪರ್ಕ ಮೊದಲಾದ ಕಾರಣಗಳಿಂದ ಸಮಾಜದ ದೃಷ್ಟಿಕೋನದಲ್ಲಿ ಬದಲಾವಣೆಯಾಗುವದುಂಟು. ತುಲನಾತ್ಮಕ ಅಭ್ಯಾಸದಲ್ಲಿ ಧಾರ್ಮಿಕ ವಿಚಾರಗಳ ವಿಷಯಕ್ಕೆ ಹೊಸ ದೃಷ್ಟಿಯು ಪ್ರಾಪ್ತವಾಗುವುದು. ಪರಿಸ್ಥಿತಿಯ ಒತ್ತಾಯದಿಂದ ತಮ್ಮ ಹಳೆಯ ಆಚಾರಗಳು ಆಧುನಿಕ ಯುಗಕ್ಕೆ ನಿರುಪಯುಕ್ತವಾಗಿವೆಯೆಂಬ ಅನುಭವವು ಆಡಿಗಡಿಗೆ ಬರುವುದು. ಇಂತಹ ಸಂದರ್ಭಗಳಲ್ಲಿ ಧಾರ್ಮಿಕ ನಡೆನಳಿಯು ಎಂದಿನಂತೆ ಇದ್ದಕಿದ್ದ ಹಾಗೆಯೆ ಉಳಿಯುವುದು ಅಶಕ್ಯವಾಗುವುದು. ಕಲಿಯುಗಾದಿ ನಿಮಿತ್ತಗಳನ್ನು ಮುಂದೆ ಮಾಡಿ ಸನಾತನಿಗಳಿಗೂ ಕೂಡ ಬದಲಾವಣೆಗೆ ತಲೆವಾಗಲೇಬೇಕಾಗುತ್ತದೆ!

ಯುರೋಪ ಅಮೇರಿಕೆಗಳಲ್ಲಿ ಸಮಾಜಶಾಸ್ತ್ರದ ವಿಕಾಸವು ಅತಿಭರದಿಂದ ವಿವಿಧ ರೀತಿಯಲ್ಲಿ ಸಾಗಿರಲು ಈ ವಿಷಯಕ್ಕೆ ಹಿಂದುಸ್ಥಾನದ ಪ್ರತಿ ಕ್ರಿಯೆಗಳೇನು ?

ಪಶ್ಚಿಮ ದೇಶಗಳ ಎಲ್ಲ ಬಗೆಯ ತಾಂತ್ರಿಕ ಪ್ರಗತಿ, ಆರ್ಥಿಕ ಉನ್ನತಿ, ಸಾಮಾಜಿಕ ಅಭ್ಯುದಯದ ಕಾಲಕ್ಕೆ ಭಾರತವು ಇನ್ನೂ ತನ್ನ ಯೋಗ-ನಿದ್ರೆಯನ್ನು ಪೂರ್ಣ ಮುಗಿಸಿರಲಿಲ್ಲ. ಪಾರತಂತ್ರ್ಯದ ಪಾಶಗಳಿಂದ ಮುಕ್ತವಾಗಿದ್ದಿಲ್ಲ. ಸಮಾಜವು ಜೀವಂತವಿದ್ದರೆ ತಾನೆ, ರಾಷ್ಟ್ರಕ್ಕೆ ಸ್ವಾತಂತ್ರ್ಯ ? ಅಖಂಡ ಏಕಾತ್ಮಕ ಸಮಾಜವು ಭಾರತದಲ್ಲಿ ತಲೆಯೆತ್ತದಂತೆ ಬ್ರಿಟಿಶ ಆಡಳಿತಗಾರರು ಏನು ಮಾಡಬೇಕೊ ಅದೆಲ್ಲವನ್ನೂ ಮಾಡಿದ್ದರು. ಭಾರತದಲ್ಲಿ ನಾಲ್ವತ್ತುಕೋಟಿ ಜನಗಳಿದ್ದುದೇನೊ ನಿಜ. ಆದರೆ ಎಷ್ಟು ಜನಗಳೊ ಅಷ್ಟು ಸ್ವತಂತ್ರಲೋಕಗಳು; ಒಬ್ಬರೊಬ್ಬರ ಹತ್ತಿರ ಇರಬೇಕಾದುದು ಅನಿವಾರ್ಯವೆಂದು, ಒಬ್ಬರೊಬ್ಬರ ನೆರೆಯಲ್ಲಿ ವಾಸವಾಗಿರುವರು ಇಷ್ಟೆ. ಪ್ರಯಾಣದೊಳಗೆ ರೈಲಿನಲ್ಲಿ ಅಥವಾ ಮೋಟಾರಿನಲ್ಲಿ ತೊಡೆ ಸೋಂಕಿ ಕುಳ್ಳಿರಬೇಕಾಗುವುದೆಂದು ಅವರೇನು ಆಪ್ತ-ಬಾಂಧವರಾಗಬಲ್ಲರೆ?

ಕೆಲವರು ಕೈಲಾಸ ಲೋಕದವರು; ಕೆಲವರು ವೈಕುಂಠ ಲೋಕದವರು; ಕೆಲವರ ಪಂಚಪ್ರಾಣಗಳು ಮಕ್ಕಾದಲ್ಲಿ. ಇಂತಹರ ಓಣಿ-ಕೇರಿಗಳೂ ಬೇರೆ ಬೇರೆಯೆ ಅವರವರ ಸಮಾಜವೇ ( ? ) ಬೇರೆ; ಅವರವರ ದೈವ(ತ), ದೈವದವರೂ ಬೇರೆ. ಒಂದೊಂದು ಜಾತಿಯವರ ಕಾನೂನುಗಳೂ ಬೇರೆ. ಇಷ್ಟೇ ಅಲ್ಲ; ಸತ್ತಬಳಿಕ ಸೇರುವ ಸುಡುಗಾಡೊ-ಹುಗಿವ ಕಾಡೊ ಅದೂ ಕೂಡ ಬೇರೆ ! ಇದೇನು ಏಕಾತ್ಮಕ ಅಖಂಡ ಸಮಾಜದ ಲಕ್ಷಣವೆ ?

ಈ ಬಗೆಯಾಗಿ ಸಮಾಜವು ಛಿನ್ನವಿಚ್ಛಿನ್ನವಾಗಲಿಕ್ಕೆ ಬ್ರಿಟಿಶರೇ ಕಾರಣರೆಂದು ಹೇಳುವುದು ಸಂಪೂರ್ಣ ಸತ್ಯವೆನಿಸದು. ಅವರು ಬಂದಾಗ ಹೇಗಿತ್ತೊ, ಹಾಗೆಯೆ ಇರುವಂತೆ ಅದಕ್ಕೂ ಸ್ವಲ್ಪ ಹೆಚ್ಚಾಗಿಯೆ ಅಸಂಬದ್ಧವಾಗುವಂತೆ ಹಂಚಿಕೆಗಳನ್ನು ಹೂಡಿದರು; ಹೊರತು ಅಖಂಡ, ಏಕಾತ್ಮಕವಾಗಿದ್ದುದನ್ನು ಬ್ರಿಟಿಶರು ತುಂಡರಿಸಿ ವಿಭಾಗಿಸಿದರೆಂಬುದು ಶೀರ ಸುಳ್ಳು.

ಅಖಂಡ, ಏಕಾತ್ಮಕ ಸಮಾಜವು ಇದ್ದುದಾಗಿದ್ದರೆ ಬ್ರಿಟಿಶರಿಗೆ ಭಾರತದಲ್ಲಿ ಕಾಲೂರಿ ನಿಲ್ಲುವುದೇ ಸಾಧ್ಯವಿಲ್ಲ. ಬ್ರಿಟಿಶರಿಗೆ ಏಕೆ ಮುಸಲ್ಮಾನರಿಗೂ ಕೂಡ ಭಾರತದಲ್ಲಿ ಪ್ರವೇಶದೊರೆಯುವುದೇ ದುಸ್ತರವಾಗುತ್ತಿತ್ತು.

ಭಾರತೀಯರಲ್ಲಿ ಅಖಂಡ ಏಕಾತ್ಮಕ ಸಮಾಜದ ಕಲ್ಪನೆಯು ವೇದ ಕಾಲದಷ್ಟು ಪುರಾತನವಾಗಿದೆ. ಆದರೇನು ? ಋಗ್ವೇದದ 'ಪುರುಷ' ಸೂಕ್ತದಲ್ಲಿ ಹಾಡಿದ್ದನ್ನೇ ಇಂದಿನ ವರೆಗೂ ಮತ್ತೆ ಮತ್ತೆ ಹೆಚ್ಚು—ಅಲ್ಲ; ಕಡಿಮೆ ಮಾಡುತ್ತ ಹೇಳುತ್ತ ಬಂದಿದ್ದೇವೆ. ಹಾಡಿದ್ದನ್ನೇ ಹಾಡುವ ದಾಸರಿಗಿಂತಲೂ ಹೆಚ್ಚಿನ ಬೆಲೆಯೇನು ಇಂತಹರಿಗೆ ಲೋಕದಲ್ಲಿ ? ಜಗದ್ರಂಗದಲ್ಲಿ ಬಂದಿರುವ ಬೆಲೆಯೇ ಇದಕ್ಕೆ ಪ್ರಮಾಣ.

ಇಂದು ಸುಧಾರಿಸಿದುವೆಂದು ಹೆಮ್ಮೆಬಡುವ ನಾಡುಗಳಲ್ಲಿ ಜನ ಇನ್ನೂ ಕಾಡಾಡಿಗಳಾಗಿದ್ದರು. ಕ್ರಿಸ್ತಾಬ್ದದ ಮೊದಲು ನಾಲ್ಕುಸಾವಿರ ವರುಷ; ಅಷ್ಟು ಪ್ರಾಚೀನ ಕಾಲದಲ್ಲಿ ಭಾರತೀಯರಿಗೆ ಹೊಳೆದ 'ಸಮಾಜ' ವಿಚಾರವು ಅಪೂರ್ವವಾಗಿದೆ. ಕೌತುಕಾಸ್ಪದವಾಗಿದೆ. ಅಂದಿನವರ ಪ್ರತಿಭೆ, ಮೇಧಾಶಕ್ತಿಯ ತೇಜಸ್ಸಿನ ನಿದರ್ಶನವದು. ಸಮಾಜವನ್ನು ಅನಂತ-'ಪುರುಷ'ನಿಗೆ ಹೋಲಿಸಿದ್ದುದು ತುಂಬ ಉಚಿತವಾಗಿದೆ. ಸಮಾಜ ಪುರುಷನಿಗೆ ಅನಂತತಲೆ; ಅನಂತಕಣ್ಣು; ಅನಂತಕಾಲು....; ಎಂಬುದೆ 'ಸಹಸ್ರ ಶೀರ್ಷಃ ಪುರುಷಃ' ಎಂಬ ವರ್ಣನೆ. ಈ ಅನಂತ, ಅವ್ಯಕ್ತ (ಸಮಾಜ) ಪುರುಷನು ಚಾತುರ್ವರ್ಣ್ಯದ ರೂಪದಲ್ಲಿ ನಿಶ್ಚಿತರೂಪದಿಂದ ಕಾಣಿಸಿಕೊಳ್ಳುತ್ತಾನೆ. ಚಾತುರ್ವರ್ಣ್ಯವು ಶ್ರಮವಿಭಾಗದ ತತ್ವವನ್ನವ ಲಂಬಿಸಿದೆಯಲ್ಲದೆ ಜನ್ಮವನ್ನು ಸರ್ವಥಾ ಅಲ್ಲ. 'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ-ಕರ್ಮವಿಭಾಗಶಃ' ಎಂಬ ಗೀತಾವಚನದಿಂದಲೂ ಈ ಮಾತಿಗೆ ಪುಷ್ಟಿದೊರೆಯುತ್ತದೆ. ಭಾರತದಲ್ಲಿಯೆ ಮಾತ್ರವಲ್ಲ; ಲೋಕ ದೊಳಗಿನ ಯಾವ ಸಮಾಜವೇ ಆಗಲಿ, ಶ್ರಮವಿಭಾಗದ ತತ್ವದ ಮೇರೆಗೆ ಸ್ಥೂಲವಾಗಿ ನಾಲ್ಕು ವಿಭಾಗಗಳಲ್ಲಿ ವರ್ಗೀಕರಿಸಬಹುದಾಗಿದೆ ಆದುದ ರಿಂದ ಚಾತುರ್ವರ್ಣ್ಯವು ಕೇವಲ ಭಾರತೀಯರ ವೈಶಿಷ್ಟ್ಯವೆಂಬುದು ಒಣ ಹೆಮ್ಮೆ. ಮೂಲ ಉದ್ದೇಶವನ್ನು ಕಡೆಗಣಿಸಿ ಜನ್ಮದಿಂದ ವರ್ಣಗಳನ್ನು

ನಿಶ್ಚಯಿಸುವ ಪ್ರವಾಹಪತಿತ ಕರ್ಮವು ಮಾತ್ರ ಭಾರತೀಯರ ವೈಶಿಷ್ಟ್ಯ. ಅದರ ಮೂಲ ಉಜ್ವಲ ರೂಪವನ್ನು ಮಸುಳಿಸಿದ್ದು ಭಾರತೀಯರ ಕರ್ಮ.

ಪುರುಷಸೂಕ್ತದ ಈ ಕಲ್ಪನೆಯ ಬೆಳಕಿನಲ್ಲಿಯೆ ಪುರಾಣಗಳು ಇನ್ನೂ ಸ್ವಲ್ಪ ಮುಂದುವರಿದು ಒಂದು ಹೊಸ ಬಗೆಯ ರೂಪಕವನ್ನು ಚಿತ್ರಿಸಿವೆ. ಅದೂ ಇಷ್ಟೇ ಮನೋಹರವಾಗಿದೆ. *ಅನಂತನ ನಾಭಿಕಮಲದಿಂದ ಚತುರ್ಮುಖ ಬ್ರಹ್ಮನು ಜನ್ಮತಾಳುವನು. ಬಳಿಕ ವ್ಯಕ್ತಸೃಷ್ಟಿಗೆ ಆರಂಭವಾಗವುದು. ವೇದಗಳಲ್ಲಿ ನಾಭಿಯಿಂದ ಬ್ರಹ್ಮನು ಹುಟ್ಟಿದ ವರ್ಣನೆಯು ದೊರೆಯುವುದಿಲ್ಲ. ಪುರುಷಸೂಕ್ತವಂತೂ ಅನಂತನ ವರ್ಣನೆಯೆಂಬಲ್ಲಿ ಸಂದೇಹವೇ ಇಲ್ಲ. ಸಹಸ್ರಶೀರ್ಷ ಪುರುಷನಿಂದ ಜನ್ಮತಾಳಿದುವೆಂದು ಪುರುಷಸೂಕ್ತದಲ್ಲಿ ವರ್ಣಿಸಿದ ಚಾತುರ್ವರ್ಣ್ಯಗಳನ್ನೇ, 'ಅನಂತನ' ಚಿತ್ರಶಿಲ್ಪಿಯು ಆತನ ನಾಭಿಕಮಲದಲ್ಲಿ ಚತುರ್ಮುಖ ಬ್ರಹ್ಮನನ್ನು ಕಲ್ಪಿಸಿ ತನ್ನ ಪ್ರತಿಭೆಯ ಹೊಚ್ಚ ಹೊಸತನವನ್ನು ಮನಗಾಣಿಸಿಕೊಟ್ಟಿದ್ದಾನೆ. ಇಲ್ಲಿ 'ನಾಭಿ' ಎಂದರೆ (ಮನುಷ್ಯನ) ಹೊಕ್ಕಳು ಎಂದು ಯಾರಾದರೂ ಗ್ರಹಿಸಿದರೆ ಅದು ಅವರ ಅಲ್ಪಬುದ್ಧಿಯ ಲಕ್ಷಣ; 'ನಾಭಿ' ಎಂದರೆ ಕೇಂದ್ರ ಎಂದರ್ಥ. 'ಅರಾ ಇವ ರಥ ನಾಭೌ' ಎಂಬ ಉಪನಿಷದ್ವಾಕ್ಯದಲ್ಲಿ ಈ ಅರ್ಥವನ್ನು ಮನಗಾಣಬಹುದು. ಅನಂತ (ಸಮಾಜ) ಪುರುಷನ ನಾಭಿಯಿಂದ (ಎಂದರೆ ಮಧ್ಯದೊಳಗಿಂದ) ನಾಲ್ಕು ವರ್ಣಗಳು ವ್ಯಕ್ತವಾಗುವುವು. ಸಂಸಾರ-ವ್ಯವಹಾರಗಳಿಗೆ—ಎಂದರೆ ವ್ಯಕ್ತಸೃಷ್ಟಿಗೆ ಇಲ್ಲಿಂದಲೇ ಆರಂಭ.

ಕಂನಾಡವರಲ್ಲಿ ಸಮಾಜಕ್ಕೆ 'ದೈವದವರು' ಎಂದು ಹೇಳುವ ವಾಡಿಕೆಯುಂಟು. ಅದು ಅತ್ಯಂತ ಅರ್ಥಪೂರ್ಣವಾಗಿದೆ. ಇಲ್ಲಿ ದೈವ, ಎಂದರೆ 'ವಿಧಿ'; 'ದೈವದವರು' ಎಂದರೆ ವಿಧಿಸುವವರು; ತಪ್ಪು ಒಪ್ಪುಗಳನ್ನು ನಿರ್ಧರಿಸಿ ವ್ಯಕ್ತಿಗಳ ಹಣೆಬರೆಹ ಬರೆವವರು. ಪಂಚಮುಖ ಪರಮೇಶ್ವರ. (ಪಾಂಚಾಂಮುಖೀ ಪರಮೇಶ್ವರ ಎಂಬ ಗಾದೆ ಮರಾಠಿಯಲ್ಲುಂಟು). ಊರ ಪಂಚರು ಆ ಊರ ಈಶ್ವರರೇ; ಈಶನೆಂದರೆ ಆಳುವವನು. ರಾಜನು

*ಅಗ್ನಿ ವಿದ್ಯೆ ಪು. ೪೮.೫೦ 'ಅನಂತನ ಸಾಕ್ಷಾತ್ಕಾರ' ನೋಡಿ.

ಈಶ್ವರಾಂಶನೆಂಬ ಭಾವನೆಯಲ್ಲಿ ಈ ಅರ್ಥವೇ ಅಡಗಿದೆ. (ಅದು ಪೂರ್ಣ ಅಡಗಿ ಕಾಣದಾದುದು, ನಾವು ಕಣ್ಣು ಕಳೆದುಕೊಂಡ ಕಾಲದ ನಿದರ್ಶಕ).

ರಾಜನು ಈಶನೆಂಬುದು, 'ನಾವಿಷ್ಣುಃ ಪೃಥಿವೀ ಪತಿಃ', ಎಂದು-ಉಸುರುವುದು; ಸಮಾಜಕ್ಕೆ 'ದೈವದವರು,'— ದೇವರೆಂದು ಬಗೆಯುವುದು; ಇದೆಲ್ಲ ಈ ಯುಗದಲ್ಲಿ ಹೇಗೆ ತಾನೆ ಸಮರ್ಥನೀಯ? ರಾಜನೇ ದೇವರೆಂದು ಗ್ರಹಿಕೆಯಾಗಿ ಜನ ವಿರೋಧಿಸದೆ ಅರಸರ ಅನಾಚಾರಗಳನ್ನು ಸಹಿಸಿಕೊಂಡರು; ಅದರಿಂದ ಜನರ ಹಾನಿಯಾಯ್ತು. ರಾಜಸಂಸ್ಥೆಯೂ ಅಧೋಗತಿಗೆ ಇಳಿದಿತು. ದೈವದವರ ಕಟ್ಟು, ಕಟ್ಟಳೆಗಳೆಂದರೆ ಅದೊಂದು ಸಮಾಜ-ಪುರುಷನಿಗೆ ಹಾಕಿದ ಉಕ್ಕಿನ ಪಂಜರವಾಗಿ ಪರಿಣಮಿಸಿ ಜೀವನ ವಿಕಾಸವೆ ಕಟ್ಟಾಯಿತು ರೂಢಿ–ಸಂಪ್ರದಾಯಗಳು ಪ್ರಗತಿಪಥದಲ್ಲಿ ಕಾಲ್ತೊಡಕಾದುವು. ಇದನ್ನು ತಿಳಿದೂ ತಿಳಿದೂ ಮತ್ತೆ ಸಮಾಜಕ್ಕೆ 'ದೈವ'ವೆಂದು ಭಾವಿಸುವುದು ಯುಕ್ತವಾದೀತೆ ?

ಅಲ್ಲದೆ ಹಿಂದಿನ ಅಧ್ಯಾಯದ ಆರಂಭದಲ್ಲಿ ಎತ್ತಿದ ಪ್ರಶ್ನೆಗೆ ಇನ್ನೂ ಪೂರ್ಣ ಉತ್ತರವು ದೊರೆತಂತಾಗಿಲ್ಲ. ಆ ಪ್ರಶ್ನೆಯಲ್ಲಿ ಎರಡು ಭಾಗಗಳಿದ್ದುವು : ಸಮಾಜವೆಂಬುದು ಉಂಟೆ, ಸ್ವಾರ್ಥಿಗಳಾದ ವ್ಯಕ್ತಿಗಳ ಆಟ ಇದೆಲ್ಲ; ಇದರಲ್ಲಿ ಸಮಾಜವು ಉಂಟು, ಎಂಬುದು ಒಪ್ಪಿಗೆಯಾದರೂ. ಸ್ವಾರ್ಥಿಗಳಿಂದ ತುಂಬಿದ ಈ ಸಮಾಜಕ್ಕೆ 'ದೈವ' ಜನತಾ ಜನಾರ್ದನ, ಪಂಚಮುಖ ಪರಮೇಶ್ವರ ಎಂದು ಮುಂತಾಗಿ ಗ್ರಹಿಸಿರುವುದು ಸಮಂಜಸವೆ ? ಎಂಬೀ ಈ ಪ್ರಶ್ನೆಯು ಹಾಗೆಯೆ ಉಳಿದಿದೆ.

ಆಧುನಿಕ ಯಂತ್ರಯುಗದಲ್ಲಿ ದೇವರ ಸ್ವತಂತ್ರವಾದ ಬಿಡಾರವು ಎಲ್ಲಿಯೂ ದೊರೆಯದೆ ನಿರಾಶರಾದ ಕೆಲವರು ಸಮಾಜಕ್ಕೇ ದೇವರೆಂದು ಕರೆದು ತಮ್ಮ ಜೀವಕ್ಕೆ ಸ್ವಲ್ಪ ಸಮಾಧಾನ ತಂದುಕೊಳ್ಳುತ್ತಾರೆ. ಮುಗಿಲಕ್ಷ ಎಷ್ಟು ಎತ್ತರಕ್ಕೆ ಹೋದರೂ ಕೈಲಾಸ–ವೈಕುಂಠ ಒಂದೂ ಕಾಣಲಿಲ್ಲ. ಎಷ್ಟು ಸಾಗರಪರ್ಯಟನ ಮಾಡಿದರೂ 'ಕಡಲಶಯನ ಶೇಷಶಾಯಿ'ಯ ಸುಳಿವು ಹತ್ತಲಿಲ್ಲ. ನೆಲ ಅಗಿದು ಒಳಹೊಕ್ಕು ನೋಡಿದರೂ ಲಾವಾರಸದ ಭೀಕರ ಉಷ್ಣತೆ; ಪಾತಾಳಲೋಕ ದೊರೆಯಲಿಲ್ಲ. ಅಣು ಬಗೆದು ನೋಡಿದರೂ ಕಂಭದಲ್ಲಿ ಕಂಡ ನರಸಿಂಹನ ಛಾಯೆಯು ಕೂಡ ಗೋಚರಿಸಲಿಲ್ಲ.

ಆದರಿಂದ ದೇವರ ಕಲ್ಪನೆಯನ್ನೇ ಬದಲಿಸಿಕೊಳ್ಳದೆ ಗತಿಯಿರಲಿಲ್ಲ. ಈ ತೆರನಾಗಿ ಆಧುನಿಕರಲ್ಲೂ ಹಲಕೆಲರು ಸಮಾಜಕ್ಕೆ ದೇವರೆಂದು ಹೇಳ ಹತ್ತಿದರು.

ಮಂಗನಿಂದಾದ ಮಾನವ; ಈತನ ಮೂಲಗುಣ ಮಂಗಾಟ ವೆಂದಂತಾಯಿತು. ಆದಕಾರಣ ಇವನ ಮಂಗ–ತತ್ವಜ್ಞಾನದಲ್ಲಿ ಕಳ್ಳಿ, ಕಿಡಿಗೇಡಿತನ, ಪೋಲಿತನದ ಮಂಡನವೆ ಇರಬೇಕಷ್ಟೆ ? ಮಂಗವಿಚಾರಗಳು ಮೋಹಕವಾಗಿಕಾಣಲು ಅವಕ್ಕೆ ಸದ್ವಿಚಾರದ ಮೆರುಗುಕೊಡುವಲ್ಲಿಯೆ ಈತನ ಪ್ರತಿಭೆಯ ವೈಖರಿ. ಬಣ್ಣಬಳಿದು ಅಂದವಾಗಿ ಕಾಣುವ ಕಿಟ್ಟದ ಬೊಂಬೆಯಂತೆಯೆ, ಮಾನವನ ನಡೆನುಡಿ! ಪೂರ್ವ ಭಾಗವನ್ನು ಒಪ್ಪಿದರೂ ಈ ಕೊನೆಯ ಮಾತನ್ನು ಸರಿಯೆಂದು ಗ್ರಹಿಸಲು ಯಾರ ಮನಸ್ಸಿಗೂ ಸಂತೋಷವೆನಿಸುವಂತೆ ಕಾಣುವುದಿಲ್ಲ. ಏಕೆ ?

ಫ್ರಾಯಿಡ್ ಮೊದಲಾದ ಕೆಲವು ಮನೋವಿಜ್ಞಾನಿಗಳು ಮಾನವನ ನೆಲೆ ಕಂಡು ಹೇಳುವ ಮಾತುಗಳೂ ಮಂಗ ಮತವನ್ನು ನಿರಾಕರಿಸುವು ದಿಲ್ಲ. ಸ್ವಾರ್ಥ, ಅಹಂಕಾರ, ಕಾಮುಕತೆ....ಇಂತಿವು ಮೂಲಭೂತ ಗುಣಗಳು ಇವುಗಳನ್ನು ಶಕ್ಯವಿದ್ದಷ್ಟು ಉದಾತ್ತಮಟ್ಟಕ್ಕೆ ಒಯ್ಯುವುದೇ ಮಾನವ್ಯದ ಗುರಿ ಎಂದು ಈ ಪಥದ ವಾದ ಆದರೆ ಏನೆಂದರೂ ಮಾನವನು ಬಣ್ಣ ಬಳಿದ ಕಿಟ್ಟದ ಬೊಂಬೆಯೆಂಬುದೇ ನಿಜವಷ್ಟೇ ? ಲೋಕಸ್ವಭಾವವು ನಾಯಬಾಲ, ಎಂಬ ಒಂದು ವಚನವಿದೆ. ಅದು ನಿಜವೆಂದಂತಾಯಿತು !

ಈ ತತ್ವವು ನಿಜವಾದರೆ, ಅನಾಚಾರವು ಅಪರಾಧವಲ್ಲ. ಏಕೆಂದರೆ ಅದು ಮಾನವನ ಹುಟ್ಟುಗುಣವಾದ ಮಂಗತನದ ಸಹಜ ಪ್ರವೃತ್ತಿ. ಈ ಕಾರಣದಿಂದಲೆ ನವಮತವಾದಿಗಳು ತಮ್ಮ ಪದಪಟ್ಟಿಯೊಳಗಿಂದ ಅನಾಚಾರ-ಅನೀತಿ ಎಂಬೀ ತೆರದ ಮಾತುಗಳನ್ನು ತೆಗೆದು ಹಾಕಿದ್ದಾರೆ. ಆದುದರಿಂದ ಈ ಪಂಥದವರನ್ನು ಅಧಾರ್ಮಿಕರು, ಅನಾಚಾರಿಗಳು ಎಂದು ಕರೆವುದು ತಪ್ಪು. ಅವರು ತಮ್ಮ ತತ್ವಪ್ರಣಾಲಿಗೆ ಅನುಸರಿಸಿಯೆ ನಡೆದು ಕೊಳ್ಳುತ್ತಿದ್ದಾರೆ.

ಈಗ ಮುಖ್ಯ ಪ್ರಶ್ನೆಯಿರುವುದು ಇದು : ಮನುಷ್ಯನು ಮೂಲತಃ ಸತ್‌ಪ್ರವೃತ್ತಿಯವನೆ ? ದುಷ್‌ಪ್ರವೃತ್ತಿಯವನೆ ? ದುಷ್‌ಪ್ರವೃತ್ತಿಯವನೇ ಆಗಿದ್ದರೆ ಆತನನ್ನು ತಿದ್ದುವ ಪ್ರಯತ್ನಗಳು ವ್ಯರ್ಥವಲ್ಲವೆ ? ಇದ್ದಿಲು ಪ್ರಯತ್ನದಿಂದ ವಜ್ರವಾಗಬಲ್ಲುದು, ಎಂದು ಒಂದು ಬಗೆಯುವರು ಹೇಳಿದರೆ, ಏನು ಮಾಡಿದರೇನು ಇದ್ದಿಲು ಇದ್ದಿಲೇ, ಎಷ್ಟು ತೊಳೆದರೂ ಅದರ ಕಪ್ಪು ಹೋಗದು. ಉಪಮಾದಿಗಳಿಂದ ಇಂತಹ ಮಾತುಗಳು ಸಿದ್ಧವಾಗಲಾರವು. ಅವುಗಳಿಂದ ತಾತ್ವಿಕ ಚರ್ಚೆಯಲ್ಲಿ ತೊಂದರೆಯೆ ಹೆಚ್ಚುವುದು. ಸತ್‌ಪ್ರವೃತ್ತಿಯೇ ಮೂಲಭೂತವೆಂದು ಗ್ರಹಿಸದೆ ಇದ್ದರೆ, ಯುದ್ಧದಂತಹ ಘೋರ ಅನರ್ಥಗಳನ್ನು ಇಲ್ಲದಂತೆ ಮಾಡುವ ಹಂಬಲವು ವಿವೇಕದ್ದೆನಿಸಬಲ್ಲದೊ ? ಇಂದು ಯಾವುದಕ್ಕೆ ವಿವೇಕವೆನ್ನುವರೊ ಅದೇ ಅವಿವೇಕ; ಏಕೆಂದರೆ ವಿವೇಕ ಅಸ್ವಾಭಾವಿಕ, ಕೃತ್ರಿಮ. ಅವಿವೇಕವೆ ಸಹಜಗುಣ. ಕಾರಣ ಅವಿವೇಕವೇ ವಿವೇಕವೆಂದು ಬಗೆಯುವುದು ವಾಸ್ತವವಾಗುವುದು.

ಒಂದು ವೇಳೆ ಈ ಮಾತು ನಿಜವಾದರೆ, ಸಮಾಜಸೇವೆಯೆಂದರೆ ಯಾರ ಸೇವೆ ? ಯಾತಕ್ಕಾಗಿ ? ಜನತಾಜನಾರ್ದನ ಸೇವೆ, ದೇಶಸೇವೆಯೆ ಈಶಸೇವೆಯೆಂದು ಮೋಸಗೊಳಿಸಿಕೊಂಬುದು ಯೋಗ್ಯವೆ ?

ಜನಸಮಾಜವು ನಾಯಬಾಲ; ಅಥವಾ ಸ್ವಾರ್ಥಾದಿ ಹೀನಭಾವಗಳೇ ಮೂಲಭೂತವೆಂದು ಸಾರುವವರು, ಒಂದರಗಳಿಗೆ, ತಾವು ಯಾವಾಗಲೂ ಹೀನಪ್ರವೃತ್ತಿಯವರೋ, ದುಷ್ಟತನವೇ ತಮ್ಮ ಮೂಲ ಸ್ವಭಾವವೊ ? ಎಂದೆಂಬುದನ್ನು ಸ್ವಲ್ಪ ವಿಮರ್ಶಿಸಿಕೊಳ್ಳಬಾರದೇಕೆ ? ನೀಚನೆಂದು ವಿಖ್ಯಾತನಾದವನ ಹತ್ತಿರಕ್ಕೆ ಹೋಗಿ, ಆತನ ಅಂತರಾಳವನ್ನೂ ಪರೀಕ್ಷಿಸಬಹುದು. ತಾನು ಮೂಲತಃ ದುಷ್ಟನಲ್ಲ; ತನ್ನ ಪರಿಸ್ಥಿತಿಯಲ್ಲಿ ತನಗೆ ಹಾಗೆ ಆಗದೆ ಗತ್ಯಂತರವಿಲ್ಲದಾಗಿದೆಯೆಂದೇ ಆತನು ಹೇಳುವುದು ಕೇಳಬಂದೀತು. ಆದರೆ ನವಮತವಾದೀ ನೀತ್ಯತೀತವಾದಕ್ಕೆ ಮೇಲಣ ವಿವರಣೆಯಲ್ಲಿ ಧ್ವನಿತವಾಗುವ ಪಶ್ಚಾತ್ತಾಪದ ದನಿಯೂ ಸಮ್ಮತವಿಲ್ಲ. ಅನಾಚಾರ ಅಥವಾ ದುಷ್ಟತನವೆಂದು ಹೆಸರಿಡುವುದು, ಬಳಿಕ ಮಿಡುಕುವುದು; ಏತಕ್ಕೆ ? 'ಇದು ಮನುಷ್ಯ ಸ್ವಭಾವ; ಹಾಗೆ ಆಗತಕ್ಕುದೇ' ಎಂದು ಬಿಟ್ಟರೆ ಪಶ್ಚಾತ್ತಾಪದ ಒರಗು ಮೋರೆ ಮಾಡುವ ತೊಂದರೆಯೂ ಇಲ್ಲ. ಏನನ್ನೂ

ಮಾಡುವುದು; 'ಬದುಕಲಿಕ್ಕೆ ಮಾಡಲೇಬೇಕು;' ಅಥವಾ 'ಇದು ಮನುಷ್ಯ ಸ್ವಭಾವ; ಹೀಗೆ ನಡೆಯತಕ್ಕದ್ದೇ' ಎಂದು ಸಮಾಧಾನ ಹಚ್ಚಿಕೊಂಡು ಹಕ್ಕಿಯ ಹಾಗೆ ನಗುತ್ತ ಕೆಲೆಯುತ್ತ ಜೀವನ ಸೌಖ್ಯವನ್ನು ಹೀರುವುದರಲ್ಲಿ ಆಸಕ್ತರಾಗಿರತಕ್ಕದ್ದು; ಎಂದು ಪ್ರತಿಪಾದಿಸುವ ಬುದ್ಧಿವಂತರೂ ಉಂಟು. ಆದರೆ ಇವರ ಈ ವಿಚಾರಸರಣಿಯಿಂದ ಸಮಾಜ ಸ್ವಾಸ್ಥ್ಯವು ಸ್ಥಿರವಾಗಿ ಉಳಿದೀತೆ ? ಈ ತತ್ವವಿಧಾನವು ಸಮಾಜವನ್ನು ತೂಕತಪ್ಪಗೊಡದೆ ಮುಂದೆ ನಡಸೀತೆ? ಅಥವಾ ಸಮಾಜ ಸ್ವಾಸ್ಥ್ಯ, ಲೋಕಶಾಂತಿ ಎನ್ನುವುದೇ ಭ್ರಾಂತಿಯೆ ? ಎಂಬುದನ್ನು ಸ್ಪಷ್ಟೀಕರಿಸುವ ಕೃಪೆಮಾಡಬಹುದೇ ?

ಸುಮ್ಮನೆ ಕಿಡಿಗೇಡಿ ಕೆಲಸ ಅಥವಾ ಅನ್ಯಾಯ ಮಾಡುತ್ತಿರುವಲ್ಲಿಯೆ ಸಂತೋಷಗೊಳ್ಳುತ್ತಿರುವವರ ಸಂಖ್ಯೆಯೆಷ್ಟು ಸಮಾಜದಲ್ಲಿ ? ಯಾರ ಹೊರಗಿನ ಹೆದರಿಕೆಗೆ ಅಲ್ಲ; (ಹೊರಗೆ ಪ್ರತಿಷ್ಠೆಯ ಭ್ರಾಂತಿಯಿಂದ ತನ್ನ ಕೃತ್ಯದ ಮಂಡನ ಮಾಡುವಂತೆ ತೋರಿಸುತ್ತಿದ್ದರೂ) ಮನಸು 'ಹೀಗೆ ನೀನು ಮಾಡದೆ ಇದ್ದರೆ ಲೇಸಿತ್ತು' ಎಂದು ಒಳಗೊಳಗೇ ಕೊರೆಯುವುದಲ್ಲ! ಇದೇನು ?

ಕೆಟ್ಟಕೆಲಸವು ಇದು, ಎಂದು ತಿಳಿದೂ ತಿಳಿದೂ ಅದನ್ನು ಮಾಡುತ್ತಿರುವಲ್ಲಿ ಯಾರಿಗೂ ಸಂತೋಷವಾಗಲಾರದು. ಆದುದರಿಂದಲೆ, ಹೀನ ಕಾರ್ಯಕ್ಕೆ ಸತ್ಕಾರ್ಯ ಎಂಬ (ಅಥವಾ ಹುಟ್ಟುಗುಣವೆಂಬ ಆಧುನಿಕ ತತ್ವಜ್ಞಾನದ) ಬಣ್ಣಬಳಿದು ಅದು ನುಣ್ಣಗೆ ಕಾಣುವಂತೆ ಮಾಡುವ ಅವಶ್ಯಕತೆಯುಂಟಾಗುತ್ತದೆ. ಈ ಅವಶ್ಯಕತೆಯ ಅರ್ಥವೇನು ? ಮಾನವನಲ್ಲಿ ಬುದ್ಧಿವಾದ, ಮಂಡನಾದಿ ವಿವರಣೆಗಳು ಯಾತಕ್ಕಾಗಿ ? ಯಾರಿಗಾಗಿ ? ಯಾವುದೇ ಒಂದು ಅಂತರ್ಮನದ ಸಮಾಧಾನಕ್ಕಾಗಿಯೆ ಅಲ್ಲವೆ ? ಆ ಅಂತರಾಳದ – ಗುಹಾನಿಹಿತ ವಸ್ತುವೇ 'ಸತ್'. ಅದು ನಮ್ಮನ್ನಾಳುತ್ತದೆ; ನಮ್ಮ ಕೃತ್ಯಗಳ 'ಜವಾಬು' ಕೇಳುತ್ತದೆ. ಅದನ್ನು ಸಮಾಧಾನಪಡಿಸದೆ ಮಾಡುವ ಯಾವ ಕೃತ್ಯವೂ ಸಾತತ್ಯದಿಂದ ಸಾಗಲಾರದು. ಅದನ್ನು ಸಮಾಧಾನ ಪಡಿಸುವ ಕಷ್ಟಗಳಿಗೆ ಹೆದರಿ ಹಲವರು ಅದನ್ನು ಅಲ್ಲದ

ಮಾತಿನ ಮಾಯಾಜಾಲ ಹಮ್ಮಿ ಮೋಸಗೊಳಿಸುತ್ತಾರೆ ಇದೇ ಆತ್ಮ ವಂಚನೆ. ಆತ್ಮವಂಚಕನು ಲೋಕವಂಚಕನೆಂದೇ ಈ ವರೆಗಿನ ಇತಿಹಾಸವು ಸಾರುತ್ತದೆ.

ಸತ್‌ಪ್ರವೃತ್ತಿಯು ಮಾನವನ ಸಾರ ಇದರ ಆಧಾರದ ಮೇಲೆಯೆ ಬಾಳಿನಲ್ಲಿ ಸುಖದ ಆಶೆ ಇದನ್ನೇ ಅಲ್ಲಗಳೆದರೆ ಸುಖದಲ್ಲಿ ಆಸ್ಥೆಯೆ ಉಳಿಯುವುದಿಲ್ಲ. ಸತ್ಪ್ರವೃತ್ತಿಗೊಪ್ಪಿಗೆಯಾಗದ ಸುಖ ಸುಖವಾಗದೆ ದುಃಖವೆನಿಸುವುದು ಆದುದರಿಂದ ಜೀವನದ ಆಸ್ಥೆಯೆಂದರೂ ಸತ್ಪ್ರ-ವೃತ್ತಿಯೇ ಸರಿ. ಸಂಸಾರದಲ್ಲಿ ಈ ಮೂಲ ಸತ್‌ಪ್ರವೃತ್ತಿಯೇ ನಷ್ಟವಾದ ಸಂದೇಹವು ಸೋಂಕಿದರೂ ಸಾಕು; ಜೀವವು ಕಮರಿದಂತೆ ಎನಿಸುವುದು. ಕಗ್ಗತ್ತಲೆಯು ಕವಿದ ಅನುಭವವುಂಟಾಗುವುದು. ನಿರಾಶೆಯಿಂದುಂಟಾದ ಈ ಕಳವಳದಲ್ಲಿ ಬದುಕು ಸಾಕೆಂದೆನಿಸಿ ಸಾಯುವುದೇ ಲೇಸೆನಿಸುವುದು. ಆದುದರಿಂದ ಸತ್‌ಪ್ರವೃತ್ತಿಯೆ ಜೀವನದ ಉಗಮಸ್ಥಾನ. ಜೀವನ ಗಂಗೆಯು ಉಗಮದಲ್ಲಿಯೆ ಬತ್ತಿದರೆ, ಅಥವಾ ನೀರು ಕದಡಿ ರಾಡಿಯಾದರೆ ಮುಂದೆ ಲೋಕದಲ್ಲಿ ಅನಾಹುತಗಳಾಗುವುದು ಏನಾಶ್ಚರ್ಯ ?

ಮಾನವನಲ್ಲಿರುವ ದಿವ್ಯಾಂಶವಿದು. ಇದು ಕೆಲವರಲ್ಲಿ ಹೊಳೆಹೊಳೆದು ತೊಳಗಿ ಬೆಳಗುತ್ತಿರುವುದನ್ನು ಮನಗಾಣಬಹುದು. ಇನ್ನು ಹಲವರಲ್ಲಿ ಮಂದಮಂದವಾಗಿ ಹೊನ್ನೆಯ ಹುಳದಂತೆ ಆಗ-ಈಗ ಮಿನುಗಿ ಮರೆಯಾಗು ತ್ತಿರುವುದು ಕಂಡುಬರುತ್ತದೆ. ಇನ್ನು ಹಲವರಲ್ಲಿ 'ಶಿಲೆಯೊಳಗಿನ ಅಗ್ನಿ ಯಂತೆ' ಇದೆಯೆಂದರೆ ಇದೆ; ಇಲ್ಲವೆಂಬುದೇ ನೈಜವೆಂಬುವ ಅವಸ್ಥೆಯಲ್ಲಿ ಗುಪ್ತ-ಸುಪ್ತವಾಗಿರುವುದುಂಟು. ಅದು ಮತ್ತೆ ಚೇತನಗೊಂಡಾಗ ಅವಿ ವೇಕಿಗಳೆಂದು ತೋರುತ್ತಿದ್ದವರು ವಿವೇಕಿಗಳಾಗುವರು; ದುಷ್ಟರೆಂದು ಹೆಸರಾದವರೂ ಸಜ್ಜನರೆನಿಸಿ ಬಾಳುವರು.

ಮಾನವ ಕುಟುಂಬದೊಳಗಿನ ಈ ದೈವೀಭಾವದ ಸಮ್ಯಕ್ ಸ್ವರೂಪ ವನ್ನೇ 'ಸಹಸ್ರಶೀರ್ಷಃ ಪುರುಷಃ' ಎಂದು ಋಗ್ವೇದದ ರಮ್ಯವಾದ ಒಂದು ರೂಪಕದಲ್ಲಿ ವರ್ಣಿಸಲಾಗಿದೆ ಅನಂತ ತಲೆ, ಕಣ್ಣು, ಕೈಕಾಲುಗಳುಳ್ಳ ಈ ಸತ್-ಪುರುಷನನ್ನು ಮಾನವ ಕೋಟಿಯಲ್ಲಲ್ಲದೆ ವಿಶ್ವವೆಲ್ಲವನ್ನೂ

ವ್ಯಾಪಿಸಿ ಮಿಕ್ಕಿನಿಂತಿದ್ದಾನೆಂದು ಅಲ್ಲಿ ವರ್ಣಿಸಿದೆ. ಮಾನವ ಪ್ರಾಣಿಯಲ್ಲಿ ಹುದುಗಿಕೊಂಡಿರುವ ಈ ಸತ್‌ಪ್ರವೃತ್ತಿಯು ಅತ್ಯಂತ ಅಲ್ಪಾಂಶದ ಆಧಾರಕ್ಕೆ ವೇದದ ರೂಪಕದಲ್ಲಿ ವರ್ಣಿಸಿದಂತಹ ಅಗಾಧವಾದ ವಿರಾಟ್ ಹಿನ್ನೆಲೆಯ ಬಲವಿದ್ದಲ್ಲದೆ, ಅದು ಪ್ರಪಂಚದೊಳಗಿನ ಎಂತಹ ಘೋರ ಹಾಲಾಹಲ ವಿಷದ ದಳ್ಳುರಿಯಿಂದಲೂ ಸುಟ್ಟುಬೂದಿಯಾಗದೆ ಉಳಿದು ವಿಕಾಸಗೊಳ್ಳುತ್ತಲಿರುವ ಸಂಭವವುಂಟೆ? ಈ ತೆರನಾಗಿ ಅದು ಹಿಂದೆ ಇದ್ದಿತು, ಮುಂದೆಯೂ ಉಳಿಯುವುದು (ಯದ್ ಭೂತಂ, ಯಚ್ಚ ಭವ್ಯಂ), ಎಂಬ ನಿಷ್ಠೆಯನ್ನು ವಿಚಾರ ವಿಮರ್ಶೆಗಳಿಂದ ಅಚ್ಚಳಿಯದೆ ಉಳಿಸಿಕೊಂಡವರೇ ಸಮಾಜದಲ್ಲಿ ಅಸನ್ಮಾರ್ಗಗಳಾಗದೆ, ಯಾವ ಸಂಕಟಗಳಿಂದಲೂ ಅದಿರದೆ ಸತ್‌ಪ್ರವೃತ್ತಿಯ ಅನುಸಂಧಾನದಲ್ಲಿಯೇ ತಮ್ಮ ಅಡಿಗಳನ್ನಿಕ್ಕುತ್ತ ಮುನ್ನಡೆಯಬಲ್ಲರು.

ಮಾನವ ಕುಟುಂಬದ ಮೂಲಾಧಾರ ಅಥವಾ ಸಮಾಜದ ಆಧಾರ ಸ್ತಂಭವೇ ಈ ವಿರಾಟ್‌ಪುರುಷ. 'ಸತ್'ದ ಅನಂತರೂಪ. ಆದುದರಿಂದ, ದೇವಸೇವೆಯೆಂದರೇ ಸಮಾಜಸೇವೆ. ದೇಶಸೇವೆಯೇ ಈಶಸೇವೆ. 'ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರಪೂಜನಮ್' ಸಮಾಜ ಕಲ್ಯಾಣಮಾಡಿ ಲೋಕವನ್ನು ಆನಂದಗೊಳಿಸುವುದಕ್ಕಿಂತಲೂ ಹೆಚ್ಚಿನ ದೇವಪೂಜೆ, ವ್ರತ-ನೋಹಿ, ತೀರ್ಥ-ಯಾತ್ರೆ ಒಂದೂ ಇಲ್ಲ. ಈ ಕಾರಣದಿಂದಲೇ 'ಲೋಕಹಿತೇ ರತ'ನಾಗಿರಲು ನರನಿಗೆ ಗೀತೆಯ ಆದೇಶವಿದೆ.

ಮನುಷ್ಯನು ಅಜ್ಞಾನಮೂಲಕವಾಗಿ ಅನ್ಯಾಯಕ್ಕೆ ಪ್ರವೃತ್ತನಾಗುವನು. ಅಥವಾ ಅಲ್ಲದ ಕೆಲಸವೆಂದು ತಿಳಿದರೂ ಸಂಯಮಗುಂದಿ, ಮೈಗಳ್ಳ ಇಲ್ಲವೆ ಜೀವಗಳ್ಳನಾಗಿಯೂ ಅಡ್ಡದಾರಿಯಲ್ಲಿ ಅಡಿಯಿಡುವನು. ತಿಳುವಳಿಕೆಯು ಬಂದೊಡನೆಯೆ ಒಳ್ಳೆಡೆಯವನಾಗುವನೆಂದು ಹೇಳಲಿಕ್ಕಾಗದು. ಆದರೂ 'ಒಳದನಿ'ಯ ಕತ್ತುಹಿಸುಕದೆ ಇದ್ದರೆ ಅಡ್ಡದಾರಿಯಲ್ಲಿಯೆ ಹೆಚ್ಚು ಕಾಲನಿಲ್ಲುವುದು ಸಾಧ್ಯವಿಲ್ಲ. ಒಳದನಿಯ ಕತ್ತುಹಿಸುಕುವುದಕ್ಕೆ ಕೆಲಬಾರಿ ಮಂಗಬುದ್ಧಿ ನೆರವಾಗುವುದು; ರೂಢಿ–ಪರಂಪರೆಗಳ ಉರಲೂ (ಸ್ವತಂತ್ರ ವಿಚಾರಶಕ್ತಿಯ) ಜೀವಹಿಂಡಲು ಸಾಕು. ದೇಶ, ಧರ್ಮಗಳ ಹೆಸರಿನಲ್ಲಿ—

ಪರೋಪಕಾರದ ಹೆಸರಿನಲ್ಲಿ ಮಾಡುವ ಅಥವಾ ಮಾಡಿಕೊಂಬ ವಂಚನೆಯೂ ಅಗಾಧವಾಗಿದೆ. ಕುಟುಂಬ ಹಿತಕ್ಕಾಗಿ ಅನ್ಯಾಯ ಮಾಡುವವರು, ಸಂಸ್ಥೆ ಸಮಿತಿಗಳ ಏಳ್ಗೆಗಾಗಿ ಠಕ್ಕು ಠೌಳಿಗಳನ್ನು ಕೈಕೊಳ್ಳುವವರು, ಲಂಚ ದೊರಕಿಸಿ ಅಥವಾ ಕಳ್ಳಗತ್ತಿನಿಂದ ಹಣಕೂಡಿಸಿ ಮಠ-ಸಂಸ್ಥೆ-ಆಶ್ರಮಾದಿಗಳನ್ನು ಕಟ್ಟುವವರು, ಅಪಪ್ರಚಾರ ಕೊಲೆ ಸುಲಿಗೆಗಳಿಂದ ನಾಡಿನ ಏಳ್ಗೆಯನ್ನು ಹಾರಯಿಸುವವರೂ ಉಂಟು! ಇಂತಿವೆಲ್ಲ ಕಾರಣಗಳಿಂದ ಸಮಾಜದಲ್ಲಿ ಅನ್ಯಾಯ, ಕ್ರೂರತನ, ಕಪಟವು ತುಂಬಿಕೊಂಡಿರುವ ಅನುಭವವು ಬರುವುದೂ ಸುಳ್ಳಲ್ಲ ಇಂತಹ ಕಟು ಅನುಭವಗಳ ಸಂದರ್ಭದಲ್ಲಿಯೂ ಲೋಕದ ಮೂಲಭೂತ ಸತ್‌ಪ್ರವೃತ್ತಿಯಲ್ಲಿ ಅಚಲವಾದ ನಿಷ್ಠೆಯು ಇದ್ದುದಾದರೆ ಲೋಕದ ಕುಂದುಕೊರತೆ, ಅನಾಚಾರಗಳನ್ನು ಕಂಡು ಉಂಟಾಗುವ ರೋಷ, ಜುಗುಪ್ಸೆಯ ಬದಲು ಕರುಣೆಯು ತಲೆದೋರುವುದು. ವಿರೋಧಿಗೆ, ಪ್ರತಿಯಾಗಿ ತಾನು ಹೀನಕೃತ್ಯವನ್ನೆಸಗಬೇಕೆಂಬ ಚಪಲವು ಮಾಯವಾಗಿ ಸಂಯಮದಿಂದ ಆ ಮೂಲ ಸತ್‌ಪ್ರವೃತ್ತಿಯನ್ನು ತನ್ನಲ್ಲಿ ಉಜ್ವಲಗೊಳಿಸಿಕೊಂಡು ಇನ್ನೊಬ್ಬರಲ್ಲೂ ಅದನ್ನು ಜಾಗೃತಗೊಳಿಸುವ ಪ್ರಯತ್ನಮಾಡಬಲ್ಲನು. ಸೈನಿಕರು ಹಾಗೂ ಪೋಲೀಸರುಗಳ ಅವಶ್ಯಕತೆಯಿರುವ ವರೆಗೆ ಮಾನವನು ದುಷ್ಪ್ರವೃತ್ತಿಯುವನೆಂದು ವಾದಿಸಬಹುದಾದರೂ ಲೋಕಸಂಖ್ಯೆಯ ಮಾನದಿಂದ ಸೈನಿಕರ ಪೋಲೀಸರ ಸಂಖ್ಯೆ ಎಷ್ಟು ಅಲ್ಪ, ಎಂಬುದನ್ನೂ ಮರೆಯಲಾಗದು. ಒಳಗಣ ಸತ್‌ಪ್ರವೃತ್ತಿಯ ಒತ್ತಾಯವೇ ಒಟ್ಟನಲ್ಲಿ ಆಗಾಗ ಪ್ರಭಾವಿಯಾಗುತ್ತಿರುವುದರಿಂದಲೇ ಸಂಸಾರ ಚಕ್ರವು ಸುಸೂತ್ರವಾಗಿ ಸಾಗಿದೆಯಲ್ಲದೆ ಹೊರಗಣ ಒತ್ತಾಯದಿಂದಲ್ಲ ಇಲ್ಲವಾದರೆ ಮನೆಮನೆಗೂ ಪೋಲೀಸರನ್ನು ನಿಲ್ಲಿಸುವ ಅವಶ್ಯಕತೆ ಉಂಟಾಗಬೇಕಿತ್ತಲ್ಲವೆ ? ಮನೆಯಲ್ಲಿ, ಗೆಳೆಯರಲ್ಲಿ, ತಮ್ಮ ಗುಂಪಿನಲ್ಲಿ ಸಜ್ಜನರಾಗಿರುವವರೆ, ಹೊರಗೆ ತಾಳುವ ಅವರ ಉಗ್ರಸ್ವರೂಪವನ್ನು ಕಂಡಾಗ ಅವರೇ ಇವರೊ ? ಎಂಬ ಸಂದೇಹವುಂಟಾಗುತ್ತದೆ. ಈರ್ಷೆಯಲ್ಲಿ ಎರಡು ಬಣಗಳು, ಎರಡು ದೇಶಗಳು ಕಲಹ ಯುದ್ಧವೆಂಬ ಅಧಮ ರಾಕ್ಷಸಿ ಕೃತ್ಯಗಳಿಗೆ ಸಿದ್ಧರಾಗುವುದು ಇದೇ ತೆರನಾಗಿ !

ಅಂತೂ ಸಮಾಜದ ಉಗ್ರರೂಪವು ಒಂದುಂಟು. ಅಂತರ್ಯದಲ್ಲಿ ಶಿವಸ್ವರೂಪವಿದ್ದುದೂ ಸತ್ಯ. ಯೋಗಿ ಶಿವನು ಒಂದೊಂದು ವೇಳೆ ಬಾಲವತ್, ಪಿಶಾಚವತ್ ಅಥವಾ ಉನ್ಮತ್ತವತ್ ಆಗಿ ವಿಹರಿಸುವನೆಂದು ಇರುವ ಪೌರಾಣಿಕ ಸಂಕೇತವು ಮಾನವ ಸಮೂಹದ ಪ್ರತೀಕದ ದ್ಯೋತಕ ವಾಗಿರಲಿಕ್ಕಿಲ್ಲವಷ್ಟೆ ?

ಉಪನಿಷತ್ತಿನ ಭಾಷೆಯಲ್ಲಿ ಹೇಳಬಹುದಾದರೆ, ಮೊದಲನೆಯದು ಅ-ಸಂಭೂತಿ. ಇದರ ಉಪಾಸನೆಯಿಂದ ಅಮೃತತ್ವದ ಆನಂದವು ಪ್ರಾಪ್ತ ವಾಗುತ್ತದೆ. ಎರಡನೆಯದು ಸಂಭೂತಿ. ಇದನ್ನು ಒಲಿಸಿಕೊಂಡವರು ಸಂಸಾರದೊಳಗಿಂದ ಸುಖದಿಂದ ಪಾರಾಗುತ್ತಾರೆ. ಆದರೆ ಬರಿ ಈ ಸಂ-ಭೂತದ ಬೆಂಬತ್ತಿದವರು ನಿಜಾನಂದಕ್ಕೆ ಅಥವಾ ಸದಾನಂದಕ್ಕೆ ಎರ ವಾಗುತ್ತಾರೆ. ಕೇವಲ ಯಾವುದೊಂದನ್ನೇ ಆರಾಧಿಸುವುದು ನೆಲೆಯಿಲ್ಲದ ಕಗ್ಗತ್ತಲೆಯ ದಾರಿ!

---

೩

# ಸಮಾಜ-ವಿಕಾಸ

ಸಮಾಜ ವಿಕಾಸವೆಂದರೇನು ? ಸಸ್ಯಾದಿಗಳ ವಿಕಾಸವೆಂದರೆ ಅರ್ಥ ವಾಗಬಲ್ಲದು. ವ್ಯಕ್ತಿಯ ವಿಕಾಸವೆಂದರೂ ಅರ್ಥವಾಗುವ್ರದು. ಆದರೆ ಸಮಾಜ ವಿಕಾಸಕ್ಕೆ ಅರ್ಥವೇನು ? ಸಮಾಜದಲ್ಲಿ ಕಾಲಗತಿಯಂತೆ ಪರಿವರ್ತನಗಳು ಆಗುತ್ತಿರುವುದೇನೊ ನಿಜ ಆದರೆ ಅದು ನಿಶ್ಚಿತವಾಗಿ ವಿಕಾಸದ ದಾರಿಯಲ್ಲಿಯೆ ಹೊರಟಿದೆಯೆ ? ಹಾಗಾದರೆ ಅದರ ಪರಿಣತ ಸ್ಥಿತಿಯು ಯಾವುದು ?

ಬೃಹದಾರಣ್ಯಕದ ಯಾಜ್ಞವಲ್ಕ್ಯನ ವಿಚಾರಸರಣಿಯಂತೆ ಲೋಕವು ದಿನದಿನಕ್ಕೂ ಉತ್ತಮಗೊಳ್ಳುತ್ತಲೆ ಹೋಗಬೇಕು. ಏಕೆಂದರೆ ಆತ್ಮವು ತನ್ನಹಿಂದಿನ ಅನುಭವದಿಂದ ಬರಬರುತ್ತ ಪರಿಣತ ಸ್ಥಿತಿಯನ್ನೈದುವು ದೆಂದು ಆತನ ಸಿದ್ಧಾಂತ (೪ ೪. ೩-೫). ಆದರೆ ಪುರಾಣಗಳ ಯುಗ ಚತುಷ್ಟಯದ ಕಲ್ಪನೆಯು ಯಾಜ್ಞವಲ್ಕ್ಯರ ವಿಚಾರಕ್ಕೆ ವಿರೋಧವಾಗಿದೆ. ಕೃತ, ತ್ರೇತ, ದ್ವಾಪರ ಮತ್ತು ಕಲಿ ಎಂಬ ನಾಲ್ಕು ಯುಗಗಳು ಅನುಕ್ರಮ ವಾಗಿ ಬರುವುವು. ಮೊದಲನೆಯದು ಪರಿಪೂರ್ಣತೆಯ ಪರಮಾವಧಿ ಬಳಿಕ ಕ್ರಮವಾಗಿ ಕೆಳಕೆಳ ಮಟ್ಟಕ್ಕೆ ಬರುತ್ತ ಕಲಿಯುಗದ ಕೊನೆಗೆ ಪ್ರಳಯ ! ಉಪನಿಷತ್ತು ಅಂದರೆ ಶ್ರುತಿಗೂ ಪುರಾಣಕ್ಕೂ ಇಂತಿದು ವಿರೋಧ ! ಕ್ರಿಸ್ತಾಬ್ದದ ಆರಂಭದ ಸುಮಾರಿಗೆ ಇದರ ಜೊತೆಗೆ ಅವ ತಾರದ ಕಲ್ಪನೆ ಬೇರೆ ತಲೆಯೆತ್ತಿತು ! ಪ್ರತಿಯುಗಕ್ಕೂ ಒಂದು ಅವತಾರ ವಾಗಬೇಕು ಆ ಅವತಾರಗಳಿಂದಲೇ ಜನದ ಉದ್ಧಾರ ! ಕೆಸರಲ್ಲಿ ಸಿಕ್ಕ ಕೋಣದಂತೆ ಒರಲುತ್ತ ಇರುವ ಜನಕ್ಕೆ ಗಜೇಂದ್ರ ಮೋಕ್ಷದಂತೆ ಪರಮಾತ್ಮನು ಬಂದು ಮೇಲೆತ್ತಿ ಮುಕ್ತಿಕೊಡುವನೆಂಬ ಗ್ರಹಿಕೆಯನ್ನು ಜನತೆಯಲ್ಲಿ ಹಬ್ಬಿಸಿದ್ದಾಯ್ತು ! ಭಾರತದ ಜನ, ಪುರಾಣಕತೆಗಳ ಸೆಳವಿ ನಲ್ಲಿ ಸಿಕ್ಕು ದಿಕ್ಕುಗಾಣದಾಗಿ ದಿನಾಲು ಪ್ರಳಯದ ದಾರಿಯನ್ನು ಎದುರು ನೋಡುತ್ತ ಬೆಕ್ಕಸಗೊಂಡುದೂ ಆಯ್ತು !

ಯುರೋಪಿನಲ್ಲಿಯೂ ಜಗಚ್ಚಕ್ರವು ತಿರುಗುವ ಕ್ರಮದ ಬಗೆಗೆ ಏನೇನೊ ಕಲ್ಪನೆಗಳು ನಡೆದು ಬಂದಿದ್ದುವು. ಆದರೆ ಭೌತಶಾಸ್ತ್ರದ ಶೋಧಗಳಿಂದ, ಅದರಲ್ಲಿಯೂ ಡಾರ್ವಿನನ ವಿಕಾಸವಾದದ ಸಂಶೋಧನೆ ಯಿಂದ ಲೋಕದ ವಿಚಾರದಲ್ಲಿ ವಿಲಕ್ಷಣವಾದ ಕ್ರಾಂತಿಯಾಯ್ತು. ಡಾರ್ವಿನನು ಪ್ರಾಣಿಗಳ ದೇಹದ ವಿಕಾಸದ ಕ್ರಮವನ್ನು ಕಂಡುಹಿಡಿದನು. ಏಕಾಣುಜೀವಿಯಿಂದ ಮನುಷ್ಯನ ವರೆಗೆ ದೇಹರಚನೆಯಲ್ಲಿ ಆದ ಕ್ರಮವಾದ ಮಾರ್ಪಾಟಗಳನ್ನು ಸಪ್ರಮಾಣವಾಗಿ ಸಿದ್ಧಪಡಿಸಿದನು. ಆದರೆ ಪ್ರಾಣಿಶರೀರರಚನಾಕ್ರಮದ ವಿಕಾಸವನ್ನು ಕುರಿತ ಡಾರ್ವಿನನ ಸಿದ್ಧಾಂತವು ಜೀವನದ ಪ್ರತಿಯೊಂದು ವಿಚಾರದಲ್ಲೂ ಅನ್ವಯಿಸುವುದೆಂದು ತೋರಿಸುವ ಹಲವು ಪ್ರಯತ್ನಗಳಿಗೆ ಆರಂಭವಾಯ್ತು ಮಾನವ ಸಮಾಜದ ವಿಕಾಸಕ್ರಮವನ್ನು ಕುರಿತ ಅನೇಕ ಗ್ರಂಥಗಳು ಬರೆಯ ಲ್ಪಟ್ಟುವು. ಕಾಡಾಡಿತನದಿಂದ ನಾಗರಿಕನಾಗುವ ವರೆಗಿನ ಮಾನವನ ವಿಕಾಸದ ಬಗೆಯನ್ನು ಕುರಿತು ವಿವರಣೆಯ ಒಂದು ಗ್ರಂಥವು ಮಿಂಚಿನ ಬಳ್ಳಿಯಲ್ಲಿ ಪ್ರಕಟವಾಗಿದೆ. (ಸಮಾಜವಿಕಾಸ ಕ್ರಮ: ಬರೆದವರು ಶ್ರೀ. ನೆಗಳೂರ ಶ್ರೀನಿವಾಸರಾಯರು). ಅನ್ನಸಂಚಯಕ್ಕಾಗಿ ಅಲೆದಾಡುವ ಬೇಟೆಗಾರಿಕೆಯಿಂದ ದನಗಾರಿಕೆ, ದನಗಾರಿಕೆಯಿಂದ ಒಕ್ಕಲತನ, ಒಕ್ಕಲ ತನದಿಂದ ವ್ಯಾಪಾರೋದ್ಯೋಗದ ನಾಗರಿಕತೆಯ ವರೆಗಿನ ವಿಕಾಸಕ್ರಮ ವನ್ನು ಈ ಗ್ರಂಥ ಸಪ್ರಮಾಣವಾಗಿ ಮನಂಬುಗುವಂತೆ ವಿಶದ ಪಡಿಸಿವೆ. ಆದರೆ ಇನ್ನು ಮುಂದಿನ ವಿಕಾಸದ ಮಟ್ಟವು ಆವುದು ? ಕಳೆದ ಮಹಾಯುದ್ಧದಂತಹ ಪ್ರಳಯಕಾರಕ ಘಟನೆಗಳನ್ನು ನೆನೆದರೆ ಮಾನವನ ವಿಕಾಸವೇ ನಡೆದಿದೆಯೆಂದು ಧೈರ್ಯವಾಗಿ ಹೇಳಬಹುದೆ ?

ಜಗತ್ತಿನ ವಿನಾಶವು ಯಾವ ಕ್ಷಣಕ್ಕೆ ಬಂದೀತೆಂಬ ನಿಶ್ಚಿತವಿಲ್ಲ; ನಾಶವು ಮಾತ್ರ ತಪ್ಪಿಲ್ಲವೆಂದು ಅನೇಕ ಭೌತಶಾಸ್ತ್ರಜ್ಞರು ಭವಿಷ್ಯ ನುಡಿ ಯುತ್ತಿದ್ದಾರೆ ಸೂರ್ಯನ ಉಷ್ಣತೆಯು ಕಡಿಮೆಯಾಗಿ, ಇಲ್ಲವೆ ಪೃಥ್ವಿಯ ಒಡಲೊಳಗಿನ ಕಾವು ಇನ್ನೂ ಆರಿಹೋಗಿ, ಅಥವಾ ಧೂಮಕೇತುವಿನ ಅನಾಹುತವೂ ಬಂದು ಪೃಥ್ವಿಗೆ ಅಪ್ಪಳಿಸಿ, ಕದಾಚಿತ್ ಅಣುಬಾಂಬಿನಂತಹ

ಮಾನವನ ಅವಿವೇಕದ ಕೃತಿಯಿಂದಲೂ ಲೋಕನಾಶವಾಗುವ ಸಂಬಂಧ ವನ್ನು ಸಾರುತ್ತಿದ್ದಾರೆ. ಕೆಲವು ಗಣಿತಜ್ಞರು ಲೆಕ್ಕಹಾಕಿ ಸೂರ್ಯನ ಉಷ್ಣತೆಯಿಲ್ಲ ಎಂದು ತೀರುವುದು, ನೆಲದೊಡಲೊಳಗಣ ಬಿಸಿಯು ಎಷ್ಟನೆಯ ಇಸವಿಗೆ ಆರುವ್ರದು ಎಂಬುದನ್ನು ಬರೆದಿಟ್ಟಿದ್ದಾರೆ. 'ಇನ್ನು ಸೂರ್ಯನು ಚಂದ್ರನಾಗುವನು, ಪೃಥ್ವಿಯು ಮೇಲೆ ಹಿಮವು ಕವಿದು ಪ್ರಳಯವಾಗುವ'ದೆಂದು ೧೮೯೭ರ ಸುಮಾರಿಗೆ ಕೆಲವು ಲೆಕ್ಕಿಗರು ಗಂಟು ಮೂಟೆಕಟ್ಟಿ ಕೊನೆಯ ದಿನದ ದಾರೀನೋಡಿದರಂತೆ!

ಇತಿಹಾಸಜ್ಞರಲ್ಲಿ ಬಹುಶಃ ಅನೇಕರಿಗೆ ವಿಕಾಸವಾದದಲ್ಲಿ ಅಷ್ಟು ಶ್ರದ್ಧೆಯಿಲ್ಲ. ಒಂದೊಂದು ದೇಶದ ಐತಿಹಾಸಿಕ ಕರುಣ ಕತೆಗಳನ್ನು— ರೋಮಾಂಚಕಾರಿ ಕಾದಂಬರಿಗಳೂ ಸಪ್ಪೆಯೆನಿಸುವಂತಹ ರುದ್ರಗಂಭೀರ ದುರಂತ ಚಿತ್ರಗಳನ್ನೂ ಬಲ್ಲವರು, ವಿಕಾಸವು ಎಂದರೆ ಲೋಕದಲ್ಲಿ ಪ್ರಗ ತಿಯೇ ನಡೆದಿದೆಯೆಂದು ಹೇಳುವ ಸಾಹಸಕ್ಕೆ ಮನಸುಮಾಡರು. ಹಿಂದುಸ್ತಾನ, ಚೀನ, ಇಜಿಪ್ತ, ಬಾಬಿಲೋನ, ಅಸೀರಿಯಾಗಳ ಪ್ರಾಚೀನ ಸಾಂಸ್ಕೃತಿಕ ವೈಭವದ ಬಗೆಗೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಆ ವೈಭವ ಕಾಲದ ತರುವಾಯ ಈ ದೇಶಗಳು ಅವನತಿಯ ಚಕ್ರದಲ್ಲಿ ಸಿಕ್ಕು ನುಗ್ಗಾಗುತ್ತಿರುವುದನ್ನೂ ಯಾರೂ ಅಲ್ಲಗಳೆಯಲಿಕ್ಕಾಗುವುದಿಲ್ಲ. ಹಾಗಾದರೆ ಮಾನವರ ಕ್ರಮವಾದ ವಿಕಾಸದ ಸಿದ್ಧಾಂತವು ಎಲ್ಲಿ ಹೋಯ್ತು? ಭಾರತದ ಇತಿಹಾಸದಲ್ಲಿಯೆ ಗುಪ್ತಕಾಲದ ನಂತರ ಭಾರತ ಸ್ವಾತಂತ್ರ್ಯವೂ ಗುಪ್ತ ವಾಯಿತು. ಆ ಕಾಳರಾತ್ರಿಯು ತೀರಿ ಸ್ವಾತಂತ್ರ್ಯದ ನಸುಕು ಹರಿಯಲು ಇಪ್ಪತ್ತನೆಯ ಶತಮಾನದ ಮಧ್ಯಕಾಲವು ಕಳೆಯಿತು. ಮಾನವ ಸಮಾಜಕ್ಕೆ ವಿಕಾಸವಾದದ ಸಿದ್ಧಾಂತವನ್ನು ಅನ್ವಯಿಸುವುದಾದರೆ ಈ ಕಾಳರಾತ್ರಿಗೂ ಭಾರತದ ವಿಕಾಸಕಾಲವೆನ್ನಬೇಕಾದೀತು. ಕರಿದಕ್ಕೆ ಬಿಳಿದು ಎಂದು ಹೇಳುವ ಅನವಸ್ಥಾಪ್ರಸಂಗ!

ಕೈಸರಲಿಂಗ, ಸ್ಪೆಂಗ್ಲರ ಪ್ರಭೃತಿಗಳು ಈ ಮತದ ಅಧ್ವರ್ಯುಗಳು. ಸ್ಪೆಂಗ್ಲರನೆಂಬ ಪ್ರಕಾಂಡ ಪಂಡಿತನು ಪಶ್ಚಿಮದೇಶದ ಇಳಿಗಾಲವನು ಕುರಿತ ಒಂದು ಮಹತ್ವದ ಗ್ರಂಥ ಬರೆದು, ಲೋಕದ ಎದರು ತನ್ನ ಸಿದ್ಧಾಂತವನ್ನು ಮಂಡಿಸಿದ್ದಾನೆ. ತನ್ನ ಮತಸ್ಥಾಪನೆಗೆ ಈತನು ಬಳಸದ

ಜ್ಞಾನಶಾಖೆಯೆ ಇಲ್ಲ. ತನ್ನ ಮಹಾಗ್ರಂಥದಲ್ಲಿ ಯುಗಚಕ್ರದ ಸಿದ್ಧಾಂತ ವನ್ನು ವಿಶದಪಡಿಸಿದ್ದಾನೆ. ವಸಂತ, ಗ್ರೀಷ್ಮ, ಶರತ್ ಮತ್ತು ಹೇಮಂತ ಎಂಬ ಋತುಗಳಂತೆ ಮಾನವ ಕುಲವು ನಾಲ್ಕು ಯುಗಚಕ್ರದೊಳಗಿಂದ ಹಾಯುತ್ತದೆ. ಮೊದಲನೆಯದು ಅಂತರ್ಜ್ಞಾನದ ಯುಗ; ವೇದಕಾಲ. ಎರಡನೆಯದು ಬೌದ್ಧಿಕಯುಗ; ಆರಣ್ಯಕ ಬ್ರಾಹ್ಮಣಗಳ ಕಾಲ. ಮೂರ ನೆಯದು ಸ್ಥಿತಿಯ ಕಾಲ; ಸೂತ್ರರಚನಾಕಾಲ; ನಾಲ್ಕನೆಯದು ಭೌತವಾದ; ಭೋಗ ಪ್ರವೃತ್ತಿಯ ಕೊನೆಗಾಲ; ಸಾಂಖ್ಯಾದಿ ತತ್ವಗಳ ಪ್ರಚಾರವಾಗು ವುದು. ಪಾಶ್ಚಿಮಾತ್ಯ ದೇಶಗಳಲ್ಲಿ ಭೌತವಾದವು ಮಿತಿಮೀರಿ ಕೊನೆ ಗಾಲವು ಸಮೀಪಿಸಿದೆಯೆಂದು ಈತನು ಸಿದ್ಧಾಂತಮಾಡಿದ ಸ್ವಲ್ಪ ದಿನ ಗಳಲ್ಲಿಯೆ ೧೯೧೪ರ ಮಹಾಯುದ್ಧವು ಆರಂಭವಾಯ್ತು! ಈತನ ಸಿದ್ಧಾಂತಕ್ಕೆ ಯುರೋಪದಲ್ಲಿ ವಿಲಕ್ಷಣ ಮಹತ್ವವು ಪ್ರಾಪ್ತವಾಯ್ತು. ಸ್ಪೆಂಗ್ಲರನ ಯುಗಚಕ್ರದ ಸಿದ್ಧಾಂತವು ಪುರಾಣಕತೆಗಳ ಚತುರ್ಯುಗದ ವಿಚಾರಕ್ಕೆ ತುಂಬ ಹೋಲುತ್ತದೆ. ಈ ವಿಚಾರ ಸರಣಿಯಂತೆ ದೈವ ವಾದಕ್ಕೆ ಪಟ್ಟವು ದೊರೆಯುವುದು. ಹಣೇಬರಹ ತಪ್ಪಿಸಿಕೊಳ್ಳಲಿಕ್ಕಾಗುವು ದಿಲ್ಲವೆಂಬ ಸಿದ್ಧಾಂತವು ಪುಷ್ಟಿಗೊಳ್ಳುವುದು. ಎಲ್ಲವೂ ಮೊದಲೇ ನಿಶ್ಚಿತ ವಾಗಿದೆ. ಚಾಚೂ ಬಿಡದಂತೆ ಎಲ್ಲವೂ ಒದಗುವುದು. ನಾನು ಮಾಡುವೆ ನೆಂಬುದು ಶುದ್ಧಭ್ರಾಂತಿ. ವಿಶ್ವಚಕ್ರವು ಎತ್ತ ಒಯ್ಯುವುದೊ ಅತ್ತ ಸಾಗುವುದೊಂದೇ ತಮ್ಮ ಕೆಲಸವೆಂಬ ನಿರ್ಗತಿಕ ವೃತ್ತಿಗೆ ಪ್ರೋತ್ಸಾಹ ದೊರೆಯುತ್ತದೆ. ಇಂತೀ ನಿಯತಿವಾದದ ಕೈಯಲ್ಲಿ ಸಿಕ್ಕುಬೀಳುವುದು ಈ ದಾರಿಯಿಂದ ಅನಿವಾರ್ಯ.

ಡಾರ್ವಿನ್‌ನ ವಿಕಾಸವಾದವು ಪ್ರಾಣಿಗಳ ದೇಹವಿಕಾಸಕ್ರಮದ ಮಟ್ಟಿಗೆ ಮಾತ್ರ. ಮಾನವ ಸಮಾಜಕ್ಕೂ ಅವರ ಮನೋವ್ಯಾಪಾರಕ್ಕೂ ಈ ಸಿದ್ಧಾಂತವು ಸರಿಹೋಗದು. ಆದುದರಿಂದ ಉಳಿದೆಡೆಗಳಲ್ಲಿ ಅದನ್ನು ಬಳಸುವುದು ಅಸಮಂಜಸವೆಂದು ಕೆಲವು ಶಾಸ್ತ್ರಜ್ಞರು ವಾದಿಸಿದ್ದಾರೆ. ಟಿಂಡಾಲ ಹಕ್ಸಲೆಯು ವಿಕಾಸವಾದದ ದಾರ್ಶನಿಕರಲ್ಲೊಬ್ಬನು.

ಈ ವಿಷಯದಲ್ಲಿ ಮಹತ್ವದ ಶೋಧನೆ ಮಾಡಿದ ಶ್ರೇಯಸ್ಸು ಆತನಿಗಿದೆ. ಆದರೆ ವಿಕಾಸವಾದವೆಂದರೆ ಪ್ರಗತಿಯೇ ಎಂದು ಬಗೆಯಕೂಡದೆಂದು ಈತನ ಮತ. ಮಾನವರ ನೈತಿಕ ಅಧಃಪಾತವನ್ನು ಕಂಡು ಸಿಡಿಮಿಡಿಗೊಂಡು ಈತನ ಬಾಯಿಯಿಂದ ಕೊನೆಕೊನೆಗೆ ತೀರ ಕಟುವಾದ ಅಭಿಪ್ರಾಯಗಳು ಹೊರಬಿದ್ದಿವೆ. 'ಮಾನವನಲ್ಲಾಗುತ್ತಿರುವ ವಿಕಾಸವೆಂದರೆ ವಿಶ್ವದ ಸಹಜ ವ್ಯಾಪಾರಕ್ಕೆ ಆತಂಕ ಉಳಿದ ಪಶುಗಳಿಗಿಂತ ಮಾನವ ಒಂದು ವಿಪರೀತ ಮಹಾಪಶು. ಏಕೆಂದರೆ ಈತನು ತನ್ನ ಅಕೃತ್ಯಗಳಿಗೆ ಬುದ್ಧಿಯ ಬೆಂಬಲ ಬೇರೆ ಪಡೆಯುತ್ತಾನೆ! (ಅನಾಚಾರಗಳ ಆಗರವಾಗಿ) ವಿಕಾಸವಾಗುತ್ತಿರುವ ಈ ಲೋಕವು ಯಾವುದೊಂದು ಧೂಮಕೇತುವಿನ ಆಘಾತಕ್ಕೆ ಏಕೆ ಒಳಗಾಗಲೊಲ್ಲದೋ! ಹಕ್ಸಲೆಯೊಡನೆ ದನಿಗೂಡಿಸುವ ಜನಗಳಿಲ್ಲದ ದೇಶವೇ ದೊರೆಯಲಿಕ್ಕಿಲ್ಲ. ರೂಸೋನ ಮತದಂತೆಯೂ ಆಧುನಿಕ ಪ್ರಗತಿಯು ಲೋಕವಿನಾಶಕಾರಿಯಾಗಿದೆ. ಹೊಸ ಹೊಸ ಶಾಸ್ತ್ರೀಯ ಸಂಶೋಧನಗಳಿಂದ ಅನೈಸರ್ಗಿಕತೆ ಬೆಳೆಯುತ್ತಿದೆ. ಸೃಷ್ಟಿಯ ವ್ಯಾಪಾರಗಳಿಗೆ ವಿರೋಧಿಸುವ ನಾಗರಿಕತೆಯು ಅನಾಗರಿಕತೆಯೇ ಸರಿ; ಎಂದು ಆತನ ಮತ. ಹಳ್ಳಿಗೂ ಅಲ್ಲ; ಬೇಗ ಕಾಡಿಗೇ ಮರಳಿರೆಂದು ಆತನ ಸಂದೇಶ. ಆದರೆ ಕಾಡಿನಲ್ಲಾದರೂ ಆದರ್ಶ ಸಮಾಜವಿದೆಯೆಂಬ ರೂಸೋನ ಗ್ರಹಿಕೆ ಸಮರ್ಪಕವೆ? ರೂಸೋನ ಈ ಭಾವನೆಯು ತೀರ ನಿರಾಧಾರವಾದುದೂ ಕೇವಲ ಕಾಲ್ಪನಿಕವೂ ಆಗಿದೆ ಎಂದು ಆಫ್ರಿಕಾ, ಅಮೇರಿಕಾ, ಏಶಿಯಾ, ಆಸ್ಟ್ರೇಲಿಯಾ ಮೊದಲಾದ ಕಡೆಯ ಅರಣ್ಯನಿವಾಸಿ ತಂಡಗಳನ್ನು ಸಂದರ್ಶಿಸಿ, ಅವರಲ್ಲಿದ್ದುಕೊಂಡು, ಅವರ ಸ್ಥಿತಿಗತಿಗಳ ಸಂಪೂರ್ಣ ಅಭ್ಯಾಸಮಾಡಿದ ಒಬ್ಬರಲ್ಲ, ಇಬ್ಬರಲ್ಲ, ಎಲ್ಲ ಪ್ರವಾಸಿಗಳೂ ಒಕ್ಕೊರಲಿನಿಂದ ಹೇಳಿದ್ದಾರೆ. ಆದರ್ಶಸಮಾಜ, ಸಾಮಾಜಿಕ ಪ್ರಗತಿ ಅಥವಾ ವಿಕಾಸವೆಂಬುದು ಕೇವಲ ಕಾಲ್ಪನಿಕ, ಅಥವಾ ಒಂದೊಂದು ಭ್ರಮೆ; ಎಂದು ಸಮಾಜಶಾಸ್ತ್ರಜ್ಞರಲ್ಲಿ ಅನೇಕರ ಅಭಿಪ್ರಾಯವಿದೆ. ಮನುಷ್ಯಶಾಸ್ತ್ರದ (Anthropology) ಸಂಶೋಧಕರ ಬೆಂಬಲವೂ ಇದಕ್ಕುಂಟು. ಪರಿವರ್ತನವೆಂಬರ್ಥದಲ್ಲಿ 'ಪ್ರಗತಿ' ಶಬ್ದವನ್ನು ಬಳಸುತ್ತಿದ್ದರೆ ಆಕ್ಷೇಪಣೆಯಿಲ್ಲ. ಆದರೆ ವಿಕಾಸ ಅಥವಾ ಪ್ರಗತಿಯೆಂದರೆ ಪೂರ್ಣತೆಯ ಕಡೆಗೆ

ಮುನ್ನಡೆಯೆಂಬ ಅಭಿಪ್ರಾಯವಿದ್ದರೆ ಅದು ಅಯುಕ್ತವೆಂದು ಇವರ ಮತ. ಏಕೆಂದರೆ ನಾಗರಿಕರೆನಿಸಿಕೊಂಬವರಲ್ಲಿಯೂ ದುರ್ಮಿಳವಾಗಿರುವ ಪ್ರೀತಿ, ವಿಶ್ವಾಸ, ತ್ಯಾಗಬುದ್ಧಿ ಇವು ಹಲವು ಕಾಡಾಡಿ ತಂಡಗಳಲ್ಲಿ ಇನ್ನೂ ಜೀವಂತವಾಗಿವೆ ಇಂದು ಮಾನವರ ಬುದ್ಧಿ ವಿಕಾಸವಾಗಿದೆಯೆಂದು ಕೆಲರು ವಾದಿಸಬಹುದು ಆದರೆ ಪ್ರಾಥಮಿಕ ಸ್ಥಿತಿಯ ಮಾನವರಲ್ಲಿರುವ ಚಿತ್ರಕಶಕ್ತಿ, ಭಾವಸಾಮರ್ಥ್ಯವು ಬುದ್ಧಿಜೀವಿಗಳಲ್ಲಿ ಇಲ್ಲದಾಗುತ್ತದೆ. ಮಾನವನು ಒಂದನ್ನು ಗಳಿಸುವಷ್ಟರಲ್ಲಿ ಇನ್ನೊಂದನ್ನು ಕಳೆದುಕೊಳ್ಳುತ್ತಿದ್ದಾನೆ. ಮಹಾಕೋಶಗಳನ್ನು ರಚಿಸಿದ್ದಾನೆ. ಅಚ್ಚುಕೂಟಗಳ ಶೋಧದಿಂದ ಗ್ರಂಥಗಳು ಪ್ರಕಟವಾಗಿ ಬೇಕಾದಾಗ ಓದಲು ದೊರೆಯುವಂತಾಗಿದೆ. ಸರಿ; ಆದರೆ 'ಪುಸ್ತಕೇಷು ಚ ಯಾ ವಿದ್ಯಾ, ಪರಹಸ್ತಗತಂ ಧನಂ' ಏನು ಪ್ರಯೋಜನ ? ಹಿಂದಿನವರ ಅಗಾಧ ಸ್ಮರಣಶಕ್ತಿ ಇಂದಿನವರಿಗಿದೆಯೆ ? ತಲೆಯೊಳಗಿಂದ ಹೋಯ್ತು; ಪುಸ್ತಕದಲ್ಲಿ ಉಳಿಯಿತು ! ಇದೇ ರೀತಿ ಇನ್ನುಳಿದ ವಿಷಯಗಳಲ್ಲೂ ! ಇದೇನು ಪ್ರಗತಿಯೆ ? ಒಂದನ್ನು ಕಳೆದುಕೊಂಡು ಇನ್ನೊಂದನ್ನು ದೊರಕಿಸಿದರೆ ಇದಕ್ಕೆ ವಿಕಾಸವೆನ್ನಲಾದೀತೆ ? ಆದರೂ ಸಮಾಜವು ಪರಿಪೂರ್ಣತೆಯ ಕಡೆಗೇ ಸಾಗಿದೆ; ವಿಕಾಸಗೊಳ್ಳುತ್ತಲಿದೆಯೆಂದು ಪ್ರತಿಪಾದಿಸುವ ತಜ್ಞರೂ, ಸಮಾಜ-ಶಾಸ್ತ್ರಜ್ಞರೂ ಸ್ವಲ್ಪ ಜನರಿಲ್ಲ. ಅಲ್ಪರೂ ಅಲ್ಲ. ಉಪನಿಷತ್‌ಕಾಲದ ಮಹರ್ಷಿಗಳಿಗೂ ಈ ವಿಚಾರವು ಅಲ್ಪ ಸ್ವಲ್ಪ ಹೊಳೆಯದೆ ಇರಲಿಲ್ಲ. ಆದರೆ, ೩—೪ ಸಾವಿರ ವರುಷಗಳ ಹಿಂದಿನ ಬೂಜು (ಬುರುಸು) ಕಟ್ಟಿದ ಆ ಗ್ರಂಥಗಳೊಳಗಿನ ಮಾತು ಏತಕ್ಕೆ ?

ಯುರೋಪ್ಪಿನ ಸಂಸ್ಕೃತಿಯ ಆದಿ ಗುರು ಪ್ಲೇಟೋನ ಪ್ರತಿಭೆಯು ಪ್ರಜಾಪ್ರಭುತ್ವದ ಆದರ್ಶ ಚಿತ್ರವನ್ನು ಕಲ್ಪಿಸಿಕೊಳ್ಳದೆ ಇರಲಿಲ್ಲ. ಬಳಿಕ ಸಮಾಜವು ಎತ್ತ ಸಾಗಿದೆ, ಅಥವಾ ಸಾಗಬೇಕು; ಎಂಬುದರ ಸೂಚಕವಾಗಿ ಆದರ್ಶ ಕಲ್ಪನಾರಾಜ್ಯದ ವಿಚಾರವು ವಿಚಾರವಂತರ ತಲೆಯಲ್ಲಿ ಬೇರೂರಿಕೊಂಡಂತೆಯೆ ಆಯ್ತು. ರೂಸೋನಿಂದ ಆದರ್ಶ ಸಮಾಜದ ವಿಚಾರಕ್ಕೆ ಹೊಸದಾಗಿ ಪುಟದೊರಕಿತು. ಆತನ ವಿಚಾರದಿಂದ ಪ್ರಚೋದಿತನಾದ

ಮುನ್ನಡೆಯೆಂಬ ಅಭಿಪ್ರಾಯವಿದ್ದರೆ ಅದು ಅಯುಕ್ತವೆಂದು ಇವರ ಮತ.
ಏಕೆಂದರೆ ನಾಗರಿಕರೆನಿಸಿಕೊಂಬವರಲ್ಲಿಯೂ ದುರ್ಮಿಳವಾಗಿರುವ ಪ್ರೀತಿ,
ವಿಶ್ವಾಸ, ತ್ಯಾಗಬುದ್ಧಿ ಇವು ಹಲವು ಕಾಡಾಡಿ ತಂಡಗಳಲ್ಲಿ ಇನ್ನೂ
ಜೀವಂತವಾಗಿವೆ ಇಂದು ಮಾನವರ ಬುದ್ಧಿ ವಿಕಾಸವಾಗಿದೆಯೆಂದು
ಕೆಲರು ವಾದಿಸಬಹುದು ಆದರೆ ಪ್ರಾಥಮಿಕ ಸ್ಥಿತಿಯ ಮಾನವರಲ್ಲಿರುವ
ಚಿತ್ರಕಶಕ್ತಿ, ಭಾವಸಾಮರ್ಥ್ಯವು ಬುದ್ಧಿಜೀವಿಗಳಲ್ಲಿ ಇಲ್ಲದಾಗುತ್ತದೆ.
ಮಾನವನು ಒಂದನ್ನು ಗಳಿಸುವಷ್ಟರಲ್ಲಿ ಇನ್ನೊಂದನ್ನು ಕಳೆದುಕೊಳ್ಳು
ತ್ತಿದ್ದಾನೆ. ಮಹಾಕೋಶಗಳನ್ನು ರಚಿಸಿದ್ದಾನೆ. ಅಚ್ಚುಕೂಟಗಳ ಶೋಧ
ದಿಂದ ಗ್ರಂಥಗಳು ಪ್ರಕಟವಾಗಿ ಬೇಕಾದಾಗ ಓದಲು ದೊರೆಯುವಂತಾಗಿದೆ.
ಸರಿ; ಆದರೆ 'ಪುಸ್ತಕೇಷು ಚ ಯಾ ವಿದ್ಯಾ, ಪರಹಸ್ತಗತಂ ಧನಂ' ಏನು
ಪ್ರಯೋಜನ ? ಹಿಂದಿನವರ ಅಗಾಧ ಸ್ಮರಣಶಕ್ತಿ ಇಂದಿನವರಿಗಿದೆಯೆ ?
ತಲೆಯೊಳಗಿಂದ ಹೋಯ್ತು; ಪುಸ್ತಕದಲ್ಲಿ ಉಳಿಯಿತು ! ಇದೇ ರೀತಿ
ಇನ್ನುಳಿದ ವಿಷಯಗಳಲ್ಲೂ ! ಇದೇನು ಪ್ರಗತಿಯೆ ? ಒಂದನ್ನು ಕಳೆದು
ಕೊಂಡು ಇನ್ನೊಂದನ್ನು ದೊರಕಿಸಿದರೆ ಇದಕ್ಕೆ ವಿಕಾಸವೆನ್ನಲಾದೀತೆ ?
ಆದರೂ ಸಮಾಜವು ಪರಿಪೂರ್ಣತೆಯ ಕಡೆಗೇ ಸಾಗಿದೆ; ವಿಕಾಸಗೊಳ್ಳುತ್ತ
ಲಿದೆಯೆಂದು ಪ್ರತಿಪಾದಿಸುವ ತಜ್ಞರೂ, ಸಮಾಜ-ಶಾಸ್ತ್ರಜ್ಞರೂ ಸ್ವಲ್ಪ
ಜನರಿಲ್ಲ. ಅಲ್ಪರೂ ಅಲ್ಲ. ಉಪನಿಷತ್‌ಕಾಲದ ಮಹರ್ಷಿಗಳಿಗೂ ಈ
ವಿಚಾರವು ಅಲ್ಪ ಸ್ವಲ್ಪ ಹೊಳೆಯದೆ ಇರಲಿಲ್ಲ. ಆದರೆ, ೩—೪ ಸಾವಿರ
ವರುಷಗಳ ಹಿಂದಿನ ಬೂಜು (ಬುರುಸು) ಕಟ್ಟಿದ ಆ ಗ್ರಂಥಗಳೊಳಗಿನ
ಮಾತು ಏತಕ್ಕೆ ?

ಯುರೋಪ್ಪಿನ ಸಂಸ್ಕೃತಿಯ ಆದಿ ಗುರು ಪ್ಲೇಟೋನ ಪ್ರತಿಭೆಯು
ಪ್ರಜಾಪ್ರಭುತ್ವದ ಆದರ್ಶ ಚಿತ್ರವನ್ನು ಕಲ್ಪಿಸಿಕೊಳ್ಳದೆ ಇರಲಿಲ್ಲ. ಬಳಿಕ
ಸಮಾಜವು ಎತ್ತಸಾಗಿದೆ, ಅಥವಾ ಸಾಗಬೇಕು; ಎಂಬುದರ ಸೂಚಕವಾಗಿ
ಆದರ್ಶ ಕಲ್ಪನಾರಾಜ್ಯದ ವಿಚಾರವು ವಿಚಾರವಂತರ ತಲೆಯಲ್ಲಿ ಬೇರೂರಿ
ಕೊಂಡಂತೆಯೆ ಆಯ್ತು. ರೂಸೋನಿಂದ ಆದರ್ಶ ಸಮಾಜದ ವಿಚಾರಕ್ಕೆ
ಹೊಸದಾಗಿ ಪುಟದೊರಕಿತು. ಆತನ ವಿಚಾರದಿಂದ ಪ್ರಚೋದಿತನಾದ

ತಿಳಿಯದ ಅಥವಾ ಬಗೆಹರಿಯದ ವಿಷಯ. ದೇವರು ಇರಲಿ ಅಥವಾ ಬಿಡಲಿ, ಸಮಾಜ ವಿಕಾಸವಾಗುತ್ತಿರುವುದು ಮಾತ್ರ ಅನುಭವಗಮ್ಯವಾದ ತರ್ಕಶುದ್ಧ ಸಿದ್ಧಾಂತವೆಂದು ಹರಬರ್ಟ ಸ್ಪೆನ್ಸರನು ಬಹುವಿಧವಾಗಿ ತನ್ನ ವಿಚಾರವನ್ನು ಮಂಡಿಸಿದ್ದಾನೆ. ಸ್ವಲ್ಪ ಕಾಲ ಮುಂಚೆ ಆಗಿಹೋದ ಕೊಮ್ಟೆ (೧೮೪೫) ಎಂಬ ಫ್ರೆಂಚ ಸಮಾಜಶಾಸ್ತ್ರಜ್ಞನಿಂದ ಸ್ಪೆನ್ಸರನು ಈ ವಿಚಾರದಲ್ಲಿ ಬೆಳಕು ಪಡೆದಿದ್ದನು. ಆದರೆ, ಡಾರ್ವಿನನು ಪ್ರಾಣಿಶಾಸ್ತ್ರದ ಸಂಶೋಧನೆಯಿಂದ ತನ್ನ ಸಿದ್ಧಾಂತವನ್ನು ಪ್ರತಿಪಾದಿಸುವ ಮೊದಲೇ ಸ್ಪೆನ್ಸರನು ತಾತ್ವಿಕ ದೃಷ್ಟಿಯಿಂದ ವಿಕಾಸವಾದದ ವಿಚಾರವನ್ನು ಮುಂಗಂಡು ವಿವರಿಸಿದ್ದನು. ತನ್ನ ವಿಚಾರಗಳನ್ನು ಪ್ರಚಾರಕೀ ಪದ್ಧತಿಯಲ್ಲಿ ತುಂಬ ಅರಳಿಸಿ ಸೊಗಸಾಗಿ ಒರೆವ ಕಲೆಯು ಸ್ಪೆನ್ಸರನಿಗೆ ಬಹಳ ಚೆನ್ನಾಗಿ ಸಾಧಿಸಿತ್ತು. ಜಗತ್ತಿನ ಎಲ್ಲ ದೇಶಗಳಲ್ಲೂ ಹಲವು ಅನುಯಾಯಿಗಳು ದೊರೆತರು. ಸಮಾಜವು ಪರಿಪೂರ್ಣತೆಯ ಶಿಖರಕ್ಕೆ ಮುಟ್ಟುವ ಒಂದು ದಿನವು ಬರಲಿದೆ, ಬಂದೇ ಬರುವುದು ಎಂದು ಹಲವರು ನಿಶ್ಚಿತವಾಗಿ ನೆಮ್ಮಿದರು.

ಆದರೆ, ಇಷ್ಟರಲ್ಲಿ, ವಿಕಾಸವಾದಿಗಳಲ್ಲಿ ಇನ್ನೊಂದು ಸಶಕ್ತ ಪಂಥವು ತಲೆಯೆತ್ತಿತು. ಡಾರ್ವಿನನ ಸಮಕಾಲೀನನಾದ ಗಾಲ್ಟನ್ (೧೮೬೫) ಎಂಬವನು ವಿಕಾಸವಾದದೊಡನೆ ಸುಪ್ರಜಾನಿರ್ಮಾಣದ ವಿಚಾರವನ್ನು ಜನರೆದುರಿಗೆ ಇಟ್ಟನು. ಆದರೆ ಇದಕ್ಕೂ ಮೊದಲೆ ಮಾಲಥೂಸನು ಇನ್ನೊಂದು ದೃಷ್ಟಿಯಿಂದ ಈ ವಿಚಾರದ ಕಡೆಗೆ ಜನರ ಗಮನವನ್ನು ಸೆಳೆದಿದ್ದನು (೧೮೦೩). ರೂಸೋ, ಗೋಡ್ವಿನ್ ಪ್ರಭೃತಿಗಳು ಆದರ್ಶ ಸಮಾಜದ ಭಾವನಾತ್ಮಕ ಚಿತ್ರಗಳನ್ನು ಜನರೆದುರು ಹಿಡಿದು ಸಮಾಜವನ್ನು ಕಾಲ್ಪನಿಕ ಭ್ರಾಂತಿಯಲ್ಲಿ ನೂಕುತ್ತಿದ್ದಾರೆಂದು ಕಂಡು ಬಂದು, ಆ ತಪ್ಪು ಭಾವನೆಯನ್ನು ತಿದ್ದುವುದು ತನ್ನ ಕರ್ತವ್ಯವೆಂದು ಬಗೆದು ಮಾಲ-ಥೂಸನು ತನ್ನ ಪ್ರತಿವಿಚಾರವನ್ನು ಹಲವು ಆಧಾರಗಳೊಂದಿಗೆ ಗ್ರಂಥರೂಪದಲ್ಲಿ ಪ್ರಕಟಿಸಿದನು. ಲೋಕನಿಂದೆಯನ್ನು ಲೆಕ್ಕಿಸದೆ ಸತ್ಯ ಪಕ್ಷಪಾತಿಯಾಗಿ ತನ್ನ ಮತವನ್ನು ಮಂಡಿಸುವ ಎದೆಗಾರಿಕೆಯನ್ನು ತೋರಿದನು. ಹುಟ್ಟಿದ ಮಕ್ಕಳನ್ನು ಚೆನ್ನಾಗಿ ಜೋಪಾನಮಾಡಿ ಅವರನ್ನು

ಸರಿಯಾಗಿ ತರಬೇತುಗೊಳಿಸಲು ಆವಶ್ಯಕವಾದ ಆರ್ಥಿಕ ಪರಿಸ್ಥಿತಿಯಿಲ್ಲ ದವರ ಸಂತತಿ-ನಿರ್ಮಾಣ-ಕ್ರಿಯೆಯು ಅವ್ಯಾಹತವಾಗಿ ಸಾಗಿದರೆ, ಆದರ್ಶಸಮಾಜ, ಸಮಾಜವಿಕಾಸ ಎಂಬಿವೆಲ್ಲವೂ ಕನಸಿನ ರಾಜ್ಯಗಳೇ ಸರಿ. ಸಮಾಜದಲ್ಲಿ ಧನವಂತರಿಗಿಂತಲೂ ದರಿದ್ರರಿಗೆ ಮಕ್ಕಳು ಹೆಚ್ಚು. ಇದೇ ಕ್ರಮವು ಅನಿರ್ಬಂಧವಾಗಿ ಸಾಗಿದಲ್ಲಿ ಸಮಾಜದ ಅಭಿವೃದ್ಧಿಯ ಬದಲು ಅವನತಿಯೇ ನಿಶ್ಚಿತ. ಈ ಜೀವನಕಲಹದಲ್ಲಿ ಪ್ರಗತಿಗೆ ಆರ್ಥಿಕ ಅನುಕೂಲತೆಯು ಮೊದಲು ಬೇಕು; ಎಂದು ಮುಂತಾಗಿ ಅರ್ಥಶಾಸ್ತ್ರದ ಬೆಂಬಲದಿಂದ ಸುಪ್ರಜಾನಿರ್ಮಾಣಕ್ಕೆ ಆವಶ್ಯಕ ಸಂಗತಿಯನ್ನು ಮಾಲಥೂಸನು ವಿವರಿಸಿದ್ದನು. 'ಜೀವನಕಲಹ' ಎಂಬ ಪದಪ್ರಯೋಗವನ್ನು ಡಾರ್ವಿನನು ಮಾಲ್ಥೂಸನಿಂದಲೇ ಎತ್ತಿಕೊಂಡದ್ದು. ಜೀವನ ಕಲಹದಲ್ಲಿ ಬಲಿಷ್ಠರೇ ಬಾಳಬಲ್ಲರು. ಅಯೋಗ್ಯರು ಅಳಿಯಲೇ ಬೇಕು, ಎಂದು ಡಾರ್ವಿನನು ತನ್ನ ವಿಕಾಸವಾದದ ಪ್ರತಿಪಾದನೆಯಲ್ಲಿ ಸ್ಪಷ್ಟೀಕರಿಸಿದನು. ಮೆಂಡೆಲ್ಲನ ಸಂಶೋಧನಗಳಿಂದ ಆನುವಂಶಿಕ ಸಂಸ್ಕಾರಗಳ ಕೆಲವು ನಿಶ್ಚಿತ ನಿಯಮಗಳು ಗೊತ್ತಾದುವು.

ಗಿಡಗಳ ಕಸಿ (ಕಲಮ) ಮಾಡುವುದರಿಂದ ಇಷ್ಟವಾದ ಹೊಸ ಜಾತಿಯನ್ನು ನೇರ್ಪಡಿಸಿಕೊಳ್ಳಲು ಸಾಧ್ಯವಾಗಿದೆ. ಶಾಸ್ತ್ರೀಯ ರೀತಿಯಿಂದ ಸಂಗೋಪನಮಾಡಿ ಯೋಗ್ಯವಾದ ಹೆಣ್ಣುಗಂಡಿನ ಕೂಟದಿಂದ ದನ ಹಾಗೂ ಬೇರೆ ಪ್ರಾಣಿಗಳಲ್ಲಿ ತಮಗೆ ಎಂತಹದು ಬೇಕೊ ಅಂತಹ ತಳಿಯನ್ನು ಅಭಿವೃದ್ಧಿಗೊಳಿಸಿಕೊಳ್ಳಲು ಸಾಧ್ಯವಾಗಿದೆ. ಇದೇ ತೆರನಾಗಿ ಇನ್ನು ಶ್ರೇಷ್ಠ ಮಾನವ ಕುಲವನ್ನು ನಿರ್ಮಾಣ ಮಾಡಲು ಶಕ್ಯವಿದೆ; ಎಂದು ಹುಮ್ಮಸಗೊಂಡು ಗಾಲ್ಟನನು ತನ್ನ ಮತಪ್ರತಿಪಾದನೆಗೆ ಆರಂಭಿಸಿದನು (೧೮೩೫). ಜರ್ಮನಿಯ ನಿಟ್ಸೆಯು ತನ್ನ ತೇಜೋವಾಣಿಯಿಂದ 'ಬಲಂ ಉಪಾಸ್ವ' ಎಂದು ಪ್ರಚೋದನೆಗೆ ಆರಂಭಿಸಿದನು(೧೮೮೬). ವಿಕಾಸವಾದದ ಸಿದ್ಧಾಂತಕ್ಕನುಸರಿಸಿ ಇನ್ನು ಅತಿಮಾನವನ (Superman) ಯುಗವು ಬರುವುದು ನಿಶ್ಚಿತ. ದಯಾ, ಕರುಣೆಯಂತಹ ಕೆಲವು ಆತ್ಮಹಾನಿಕರವಾದ ಭಾವನೆಗಳಿಗೆ ಇಂಬುಗೊಟ್ಟು ಮಾನವ ಸಂತತಿಯು ತನ್ನ ಪ್ರಗತಿಗೆ ತಾನೇ ಬಾಧೆಯನ್ನು ತರುತ್ತಲಿದೆ. ಮಾನವ

ಕುಲದ ಏಳ್ಗೆಯಲ್ಲಿ ದೃಷ್ಟಿಯನ್ನಿಟ್ಟು ನಿರ್ದಾಕ್ಷಿಣ್ಯವೃತ್ತಿ ಪ್ರಸಂಗ ಬಂದಲ್ಲಿ ಕಠೋರತೆ, ಕ್ರೂರತೆಯನ್ನು ಸ್ವೀಕರಿಸಬೇಕು. ಅಯೋಗ್ಯರಾದವರ ಸಂತಾನ ವೃದ್ಧಿಯಾಗದಂತೆ ಉಪಾಯಗಳನ್ನು ಕೈಕೊಂಬುವುದು ಅಭಿವೃದ್ಧಿಯನ್ನು ಹಾರಯಿಸುವ ಸಮಾಜದ ಕರ್ತವ್ಯವೇ ಆಗಿದೆ. ತೋಟಿಗನು ಹುಳಹತ್ತಿದ ಸಸಿಯನ್ನು ಉಳಿಯಗೊಡುವನೆ ? ದಯೆ-ಕರುಣೆಯ ಹೆಸರಿನಲ್ಲಿ ಅಂಗಹೀನರನ್ನೂ ರೋಗಿಗಳನ್ನೂ ಹುಚ್ಚರನ್ನೂ ತಲೆತಿರುಕ ತಿಳಿಗೇಡಿಗಳನ್ನೂ ಉಳಿಯಗೊಡುವುದು, ಅವರ ತಳಿಬೆಳೆಯಗೊಡುವುದು ಅನ್ಯಾಯ; ಇದೇ ಅನೀತಿ. ಅತಿಮಾನವರ ಆಗಮನಕ್ಕೆ ಆತಂಕವನ್ನುಂಟುಮಾಡುವ ಎಲ್ಲ ಬಗೆಯಅಯೋಗ್ಯರ ಹುಟ್ಟಡಗಿಸುವ ಕೆಲಸವು ಲೋಕಕಲ್ಯಾಣಕಾರಕ ಕಾರ್ಯವೇ ಆಗಿದೆ. ಶಸ್ತ್ರಕ್ರಿಯೆಯಿಂದ ನಪುಂಸಕರನ್ನು ಮಾಡಿ, ಇಲ್ಲವೆ ಸಂತತಿಯನ್ನು ಪರಿಮಿತಿಗೊಳಿಸಿ ಮಾನವ ಲೋಕವನ್ನು ಅಧಃಪಾತದಿಂದ ಉಳಿಸುವುದು ಸರಕಾರದ ಕರ್ತವ್ಯವಾಗಿದೆ ಎಂಬ ನಿಟ್ಸೆ, ವೀರಪೂಜಕ ಕರ್ಲಾಯಿಲ್‌ರ ಓಜಸ್ವೀ ಪ್ರಚಾರದ ಪರಿಣಾಮದಿಂದ ವಾತಾವರಣದಲ್ಲಿ ವಿದ್ಯುತ್ ಸಂಚಾರವಾದಂತಾಯ್ತು. ಜರ್ಮನಿಯಲ್ಲಂತೂ ನವಚೈತನ್ಯವು ನರನರಗಳಲ್ಲಿ ಸಂಚರಿಸಹತ್ತಿತು. ಶಕ್ತಿಪೂಜೆಯ ಫಲವಾಗಿ ಜರ್ಮನಿಯಲ್ಲಿ ಪ್ರಚಂಡ ವೀರ್ಯವು ಕಾಣಿಸಿಕೊಂಡಿತು. ಕೈಸರ ಮತ್ತು ಹಿಟ್ಲರರು ಅದರ ವ್ಯಕ್ತ ಪ್ರತೀಕ.

ವಿಕಾಸವಾದದ ಆಧಾರದಿಂದ ಬಲಿಷ್ಠರೇ ಬದುಕಬಲ್ಲರು; 'ಬಲಂ ಉಪಾಸ್ವ' ಎಂಬ ತತ್ವದ ಪ್ರಚಾರ, ಸುಪ್ರಜಾನಿರ್ಮಾಣಶಾಸ್ತ್ರದ ಉದಯ ಇವೆಲ್ಲ ಕಾರಣಗಳಿಂದ ಜನಾಂಗದಲ್ಲಿ ಶ್ರೇಷ್ಠ-ಕನಿಷ್ಠವೆಂಬ ದ್ವೈತಭಾವಕ್ಕೆ ಪುಷ್ಟಿದೊರಕಿತು. ಜನಾಂಗವಾದವು ತಲೆಯೆತ್ತಿತು. ಬಿಳಿಯರೇ ಶ್ರೇಷ್ಠರು. ಆರ್ಯ (ಜರ್ಮನ) ಜನಾಂಗವೇ ಶುದ್ಧ ವೀರ್ಯದ ಹುಟ್ಟುಹಿರಿಮೆಯುಳ್ಳ ಕುಲ. ಕುಲೀನರಾದ ಇವರಿಗೆ ಮಾನವ ಲೋಕವನ್ನು ಆಳುವ ದೇವದತ್ತ ಹಕ್ಕು ಉಂಟು; ಎಂದು ಮುಂತಾದ ಅನುಕೂಲಸಿಂಧುವಿನ ಪ್ರಚಾರಕ್ಕೆ ಯುರೋಪಿಯರಿಗೆ ಎಡೆದೊರೆತಿತು. ಬಿಳಿಯರು ಏಶಿಯಾದ ಜಗತ್ತಿನ ಎಲ್ಲ ಭಾಗಗಳಲ್ಲಿ ಹೋಗಿ ನೆಲಸಿ, ಅಲ್ಲಿ ತಮ್ಮ ರಾಜ್ಯವನ್ನು ಸ್ಥಾಪಿಸಿ ಮೊದಲೆ ಮೆರೆಯುತ್ತಲಿದ್ದರು. ಅವರ ಆ ಪರಾಕ್ರಮಕ್ಕೆ ನಿಸರ್ಗದ

ಬೆಂಬಲವೂ ಉಂಟೆಂಬ ತತ್ತ್ವದ ಪ್ರಚಾರಮಾಡಿ, ಪರರನ್ನು ಆಕ್ರಮಿಸುವುದು ಅನ್ಯಾಯವಲ್ಲವೆಂದು ಸಿದ್ಧಪಡಿಸಲಾಯ್ತು. ಆಫ್ರಿಕಾ, ಆಸ್ಟ್ರೇಲಿಯಾ, ಅಮೇರಿಕಾ ಮೊದಲಾದ ಕಡೆಗೆ ಕಾಲುಚಾಚಿ, ಅಲ್ಲಿಯ ಮೂಲ ನಿವಾಸಿಗಳನ್ನು ಬೇಟೆಯಾಡಿ ನಾಶಮಾಡುವುದಕ್ಕೂ ಶಾಸ್ತ್ರಾಧಾರವು ದೊರೆತಿತು. ಬಿಳಿಯರು ಯುರೋಪಿನ ತಮ್ಮ ಮನೆಮಾರುಗಳನ್ನು ತೊರೆದು ಸಾವಿರಾರು ಮೈಲು ಪ್ರವಾಸ ಮಾಡಿ, ಪ್ರಯಾಸಪಟ್ಟುಕೊಂಡು ಬಂದು, ಭಾರತಾದಿ ದೇಶಗಳಲ್ಲಿ ಅಲ್ಲಿಯ ಜನರ ಉದ್ಧಾರಕ್ಕಾಗಿಯೇ ರಾಜ್ಯಮಾಡುತ್ತಿರುವರೆಂದು ತಿಳಿಗೇಡಿಗಳಾದ ದೇಸಿಗರಿಗೆ ಬಿಂಬಿಸಿ ಬ್ರಿಟಿಶರೂ ಬಿಳಿಯರೂ ಆಕ್ರಮಣಶೀಲರೆಂಬ ತಪ್ಪು ಭಾವನೆಗೆ ಎಡೆಗೊಡಬಾರದೆಂದು ಉಪದೇಶಿಸಲಾಗುತ್ತಿತ್ತು.

ಸುಪ್ರಜಾನಿರ್ಮಾಣ ಶಾಸ್ತ್ರದ ನೆರವಿನಿಂದ, ಆದರ್ಶರಾದ ಶ್ರೇಷ್ಠ ಮಾನವರನ್ನು ನಿರ್ಮಾಣ ಮಾಡುವ ತಂತ್ರವು ನಿಶ್ಚಿತವಾಗಿ ಗೊತ್ತಾಗುವುದೆಂಬ ಆಶಾವಾದವು ಹಲವರಲ್ಲಿ ದೃಢವಾಯ್ತು. ಸೌಂದರ್ಯ, ಆರೋಗ್ಯ, ಬುದ್ಧಿ, ಶಕ್ತಿಗಳೆಲ್ಲವೂ ಒಂದೆಡೆಗೆ ಸಮನ್ವಯಗೊಂಡಿರುವ ಮಾನವ ಸಮಾಜವು ಇನ್ನು ಬೇಗನೆ ಕಾಣಿಸಿಕೊಳ್ಳುವುದೆಂದು ಕನಸು ಕಂಡವರೂ ಉಂಟು ಆದರೆ ಮನಸು ಅಥವಾ ಬುದ್ಧಿಯಾಗಲಿ, ಶಾರೀರಿಕ ಗುಣಗಳಾಗಲಿ ಮುಂದಿನ ಸಂತಾನಕ್ಕೆ ನಿಶ್ಚಿತವಾಗಿಯೂ ಎಷ್ಟರ ಮಟ್ಟಿಗೆ ಬರುವುವು ಎಂಬುದರ ಲೆಕ್ಕವು ಇನ್ನೂ ಸರಿಯಾಗಿ ಗೊತ್ತಾಗಿಲ್ಲ. ಈ ವಿಷಯದಲ್ಲಿ ಜಾರ್ಜ ಬರ್ನಾರ್ಡ ಶಾನ ಒಂದು ಸಂವಾದ ಸುಪ್ರಸಿದ್ಧವಿದೆ. ಶಾನ ಅದ್ಭುತ ಪ್ರತಿಭೆಗೆ ಮೋಹಿತಳಾದ ಒರ್ವ ಫ್ರೆಂಚರಮಣಿಯು ಆತನಿಗೆ ಕಾಗದ ಬರೆದು ತನ್ನನ್ನು ಮದುವೆಯಾಗಲು ಕೇಳಿಕೊಂಡಳು. ನೀನು ಪ್ರತಿಭಾಶಾಲಿ. ನಾನು ಲೋಕೋತ್ತರ ಸುಂದರಿ. ನಮ್ಮಿಬ್ಬರ ಸಮಾಗಮದಿಂದ ಚೆಲುವು ಮತ್ತು ಚೆದುರು ಒಂದೆಡೆಯಲ್ಲಿ ಮೈಗೊಂಡ ಆದರ್ಶ ಶ್ರೇಷ್ಠ ಸಂತಾನವು ಲೋಕಕ್ಕೆ ದೊರೆಯುವುದು. ಶ್ರೇಷ್ಠ ಜನಾಂಗದ ಆಗಮನದ ವಿಚಾರದಲ್ಲಿ ಇರುವ ನಿನ್ನ ಕನಸು ನನಸಾದೀತೆಂದು ಬಿನ್ನವಿಸಿಕೊಂಡಳು. ಶಾನು ತನ್ನ ಲೋಕವಿಲಕ್ಷಣ ರೀತಿಯಲ್ಲಿ ಅವಳಿಗೆ ಕೊಟ್ಟ ಉತ್ತರವು ಮನನೀಯವಾಗಿದೆ. ನಿನ್ನ ಬಯಕೆಯೇನೊ

ಸರಿ; ಆದರೆ ನನ್ನ ರೂಪವಿಹೀನ ಶರೀರ ಮತ್ತು ನಿನ್ನ ಬುದ್ಧಿವಿಹೀನ ತಲೆ ಜೊತೆಗೂಡಿದ ಶಿಶುವು ಹುಟ್ಟಲಿಕ್ಕಿಲ್ಲವೆಂದು ಯಾರು ಆಶ್ವಾಸನಕೊಡ ಬಲ್ಲರು ?' ಗಂಡುಹೆಣ್ಣಿನ ಗುಣಾವಗುಣಗಳಲ್ಲಿ ಮುಂದಿನ ಪೀಳಿಗೆಯಲ್ಲಿ ಇಂತಹವೇ ಬಂದು ಸೇರುವುವೆಂಬ ನಿಶ್ಚಿತಿಯಿಲ್ಲ. ಅವು ಬೇರಾದ ಪ್ರಮಾಣ ದಲ್ಲಿ ಬೆರೆತುಕೊಳ್ಳುವುವು. ಮನುಷ್ಯೇತರ ಪ್ರಾಣಿಗಳಲ್ಲಿ ತಮಗೆ ಬೇಡವಾದ ಗುಣರೂಪಗಳ ಮರಿಗಳನ್ನು ನಾಶಮಾಡಿ ಅನ್ಯಗಳ ತಳಿ ಬೆಳೆಯುದಂತೆ ಮಾಡಲು ಸಾಧ್ಯವಿದೆ. ಮಾನವ ಸಮಾಜದಲ್ಲಿ ಇದಕ್ಕೆ ಅವಕಾಶವಿಲ್ಲ.

ಸುಪ್ರಜಾಜನನಕ್ಕೆ ತಕ್ಕವೆಂಬ ಕಾರಣದಿಂದಲೇ ಆದರ್ಶ ದೇಹಶಕ್ತಿ ಮತ್ತು ಧೀಶಕ್ತಿಯು ಭಿನ್ನಲಿಂಗದ ಎರಡು ಆಸಾಮಿಗಳನ್ನು ಯಾವುದೇ ಪ್ರದೇಶದಿಂದ ಶೋಧಿಸಿತಂದು ಅಂತಹರ ಸಂತಾನಾಭಿವೃದ್ಧಿಯನ್ನು ಮಾಡ ಬೇಕೆಂದರೆ, ಮಾನವನ ಮನಸ್ಸು--ಅತನ ಪೂರ್ವಸಂಸ್ಕಾರಾದಿಗಳು ಈ ಬಗೆಯ ಕೂಟಕ್ಕೆ ಅಡ್ಡಬರುತ್ತವೆ. [illegible] ಒಬ್ಬರು ಹುಡುಕಿದ 'ಕುಂಭಸಂಭವ'ದ ಯೋಜನೆಯಿಂದ ಮೇಲಿನ ತೊಂದರೆಯು ಕೆಲಮಟ್ಟಿಗೆ ದೂರವಾಗುವಂತಿದೆ. ಆದರ್ಶಪುರುಷನಿಂದ ವೀರ್ಯದಾನವನ್ನು ಪಡೆದು ಅದನ್ನು ನಳಿಕೆಗಳಲ್ಲಿ ಸಂಗ್ರಹಿಸಿ ಕಾದಿಡುವುದು, ಆಧುನಿಕ ಸಂಶೋಧನ ಗಳಿಂದ ಶಕ್ಯವಾಗಿದೆ. (ಇದೇ ರೀತಿಯಾಗಿ ರಕ್ತವನ್ನು ಸಂಗ್ರಹಿಸಿ ಇಡಲಾಗು ತ್ತಿದೆ.) ಈ ವೀರ್ಯವನ್ನು ತಕ್ಕ ಸ್ತ್ರೀಯರಿಗೆ ನೀಡಿದರೆ ಇಷ್ಟ ಸಂತತಿಯನ್ನು ಪಡೆಯುವುದು ಅಸಾಧ್ಯವಲ್ಲ. (ಪರಪುರುಷಗಮನವಿಲ್ಲದೆ ಸ್ತ್ರೀಯು ನಿರಾತಂಕವಾಗಿ ಸಂತಾನಕ್ಕಾಗಿ ಅದರ ವೀರ್ಯವನ್ನು ಧಾರಣಮಾಡುವ ಅನುಕೂಲತೆಗಳು ಸಿದ್ಧವಾಗಿವೆ.) ರಾಷ್ಟ್ರೀಯ ಹಿತದ ದೃಷ್ಟಿಯಿಂದ ಅಥವಾ ಮಾನವ ಕೋಟಿಯ ಕಲ್ಯಾಣಕ್ಕಾಗಿ ಆದರ್ಶ 'ಕುಂಭಸಂಭವ' ರನ್ನು ಬೆಳೆಯಿಸುವ ಮಹಾಯೋಜನೆಯನ್ನೊಂದು ಯಾವುದೇ ರಾಷ್ಟ್ರೀಯ ಸರಕಾರವು ಇನ್ನು ಮುಂದೆ ಕೈಕೊಳ್ಳುವುದು ತೀರ ಅಸಂಭವವಲ್ಲ. ಉದಾತ್ತ ಧ್ಯೇಯದತ್ತ ಗಮನಕೊಟ್ಟು ವಿಚಾರಿಗಳಾದ ಅನೇಕ ಹೆಂಗಳೆಯರು ಲೋಕೋದ್ಧಾರಕ್ಕಾಗಿ ಈ ತರನಾದ ತಾಯ್ತನದ ಹೊಣೆಯನ್ನು ಹೊರಲು

ಸ್ವಾರ್ಥತ್ಯಾಗ ಪೂರ್ವಕವಾಗಿ ಸಿದ್ಧರಾಗಲೂಬಹುದು. ಮಾನವ ಸಮಾಜದ ಪ್ರಗತಿಗಾಗಿ ಹೆರಿಗೆಯ ಕಷ್ಟಗಳನ್ನು ಆನಂದದಿಂದ ಸ್ವಾಗತಿಸಲು ಮುಂದೆ ಬಂದ ತ್ಯಾಗವೀರ ಮಹಿಳೆಯರಿಗೆ ರಾಷ್ಟ್ರೀಯ ಸರಕಾರವು ಶಿಶು ಸಂಗೋಪನದ ಎಲ್ಲ ಬಗೆಯ ಸೌಕರ್ಯಗಳನ್ನು ಒದಗಿಸಿಕೊಡಬಹುದು. ಈ ಬಗೆಯಾಗಿ ಶ್ರೇಷ್ಠ ಮಾನವಸಮಾಜವೊಂದು ನಿರ್ಮಾಣವಾಗುವುದು ಅಶಕ್ಯವೇ ? ಆದರೆ ಇಲ್ಲಿ ಎರಡು ಬಗೆಯ ಸಂದೇಹಗಳು ತಲೆದೋರುತ್ತವೆ. ವಿಖ್ಯಾತ ಪ್ರಾಣಿಶಾಸ್ತ್ರಜ್ಞರಾದ ಜೆ. ಬಿ ಎಸ್. ಹಾಲ್ಡೆನ ಮೊದಲಾದವರ ಸಂಶೋಧನೆಯಿಂದ ಒಂದೇ ಬಗೆಯ ಪ್ರಾಣಿವರ್ಗದಲ್ಲಿ ಜನ್ಮದೊಡನೆಯೆ ಕೆಲವೊಂದು ವ್ಯತ್ಯಾಸಗಳು ಹುಟ್ಟಿಕೊಂಡು ಬರುತ್ತವೆಂದು ಸಿದ್ಧವಾಗಿದೆ; ಮಾನವರ ಜೀವಶಕ್ತಿಯ ಮೂಲಭೂತ ಯೋಗ್ಯತೆಯು ಸರಿಸಮಾನವಾಗಿದೆ; ಎಂದು ತಾತ್ವಿಕವಾಗಿ ಗ್ರಹಿಸಿದರೂ, ಸಂಸಾರದಲ್ಲಿ ಅದು (ಜೀವವು) ವ್ಯಕ್ತವಾಗುವಾಗ ಅದಕ್ಕೆ ಹಲವು ಅಡೆತಡೆಗಳನ್ನು ಅನಿವಾರ್ಯವಾಗಿ ಎದುರಿಸಬೇಕಾಗುತ್ತದೆ ಎಷ್ಟೇ ಆದರ್ಶದೇಹವೆಂದರೂ ಅವರವರ ತಾಯ್ತಂದೆಗಳ ಭಿನ್ನಭಿನ್ನ ಆನುವಂಶಿಕ ಸಂಸ್ಕಾರಗಳು ವ್ಯಕ್ತಿವ್ಯಕ್ತಿಗಳಲ್ಲಿ ಅಸಮಾನತೆಗೆ ಜನ್ಮಕೊಡುತ್ತವೆ. ಎಲ್ಲರ ಆನುವಂಶಿಕ ಸಂಸ್ಕಾರಗಳು ಒಂದೇ ತೆರನಾದುವು ಇಲ್ಲದಿರುವದರಿಂದ, ಇರುವುದು ಅಶಕ್ಯವಾಗಿರುವುದರಿಂದ ವ್ಯಕ್ತಿವ್ಯಕ್ತಿಗಳಲ್ಲಿರುವ ತಾರತಮ್ಯವು ಎಂದೂ ಸಮೂಲ ನಾಶವಾಗಲಾರದು ರೂಪ-ಗುಣ-ಬುದ್ಧಿಗಳಲ್ಲಿ ಸಮತಾವಾದವು ಡಾನ ಕ್ವಿಗ್ಝೋಟತನವೇ ಸರಿ ಯಾವುದೊ ಒಂದು ಚುಚ್ಚುಮದ್ದಿನಿಂದ ಎಲ್ಲರಿಗೂ ಸಮಾನರೂಪ ಗುಣ-ಬುದ್ಧಿಗಳು ಪ್ರಾಪ್ತವಾಗುವಂತಹ ಔಷಧಿಯು ಸಿದ್ಧವಾಯ್ತೆಂದು ಒಂದರಗಳಿಗೆ ಕಲ್ಪಿಸುವ. ಸ್ವಾರ್ಥವೇ ಲೋಕದ ಮೂಲಸ್ವಭಾವವೆಂಬ ತತ್ವಜ್ಞಾನವು ಊರ್ಜಿತ ಸ್ಥಿತಿಯಲ್ಲಿರುವ ವರೆಗೆ ಈ ಬಗೆಯ ಶ್ರೇಷ್ಠಶಕ್ತಿಯ ಹೊಸ ಜನಾಂಗದಿಂದ ಲೋಕವಿಕಾಸದ ದಾರಿ ಸುಕರವಾಗಲಾರದು.

ಇತಿಹಾಸ-ಭೂಗೋಲ ಶಾಸ್ತ್ರದ ಸಂಶೋಧಕರಿಂದ ತಾರತಮ್ಯವಾದಕ್ಕೆ ಶಾಸ್ತ್ರೀಯ ಸ್ವರೂಪವು ಪ್ರಾಪ್ತವಾಗಿ ಇನ್ನೊಂದು ದಿಕ್ಕಿನಿಂದ ಶ್ರೇಷ್ಠ ಜನಾಂಗದ ವಿಚಾರಕ್ಕೆ ಪುಷ್ಟಿದೊರೆತಿತು ಅಲ್ಲಲ್ಲಿಯ ಹವಾಮಾನ

ಭೂಗುಣಕ್ಕೆ ಅನುಸರಿಸಿ ಒಂದೊಂದೆಡೆಯ ಪ್ರಾಣಿವನಸ್ಪತಿಗಳ ರಚನೆ ಯಿರುತ್ತದೆ ಮಾನವ ಪ್ರಾಣಿಯೂ ಸೃಷ್ಟಿಯ ಅಂಗ. ಆದುದರಿಂದ ಒಂದೊಂದು ಪ್ರದೇಶದ ಜನಾಂಗಗಳ ಗುಣಸ್ವಭಾವಗಳು ಅಲ್ಲಿಯ ವಾತಾವರಣ ಆಹಾರಾದಿಗಳಿಂದ ನಿಶ್ಚಿತವಾಗಿಬಿಡುತ್ತವೆ. ತಂಪುನಾಡಿನ ಬಿಳಿಯ ಜನಾಂಗವು ಪುಷ್ಟ ಹಾಗೂ ಬಲಿಷ್ಠ; ಸೆಕೆನಾಡಿನವರು ಕರಿಯರು; ಕುಳ್ಳರು; ಕಿರುಕುಳರು. ಇವರ ದೇಹದಂತೆ ಮನಸೂ ಬುದ್ಧಿಯೂ ದುರ್ಬಲ ... ..... ; ಎಂಬೀ ವಿಚಾರಗಳ ಗಾಳಿಯೆದ್ದಿತು. ಹೊಸ ಬಗೆಯ ದೈವವಾದವು ಲೋಕವನ್ನು ಆವರಿಸಿ, ಬಿಳಿಯರ ಹುಮ್ಮಸ ಹಿಗ್ಗಿಗೆ ಕಾರಣ ವಾಯ್ತು ಬಿಳಿಯರಲ್ಲದವರಲ್ಲಿ ನಿರಾಶೆ ನಿರುತ್ಸಾಹವನ್ನು ಹುಟ್ಟಿಸಿತು. ಮಾನವ ಜನಾಂಗದ ವಿಕಾಸ ಎಂಬುದರ ಅರ್ಥವು ಬಿಳಿಯರ ಏಳ್ಗೆ, ಎಂಬ ಗ್ರಹಿಕೆಯು ವ್ಯಾಪಿಸಿತು

"ಸಾಕ್ಷಾತ್ ಶ್ರೀವಿಷ್ಣುವಿನ ಅವತಾರನೆನಿಸಿದ ಶ್ರೀರಾಮಚಂದ್ರನಿಗೆ ಸೀತೆಯನ್ನು ಮರಳಿ ಪಡೆವಲ್ಲಿ ಕಪಿಕುಲವು ನೆರವಾಯ್ತು ಶ್ರೀ ಭಗವಂತನ ಕೃಪೆಗೆ ಪಾತ್ರರಾದ ವಾನವರಿಗೆ ಲೋಕವನಾಳುವ ವರವನ್ನು ಶ್ರೀರಾಮ ಚಂದ್ರನು ಅನುಗ್ರಹಿಸಿದನು ಬ್ರಿಟಿಶರಿಗೆ (ಬಿಳಿಯರಿಗೆ) ಭಾರತದ ಒಡೆ ತನವು ಈ ಕಾರಣದಿಂದಲೇ ದೊರೆತಿದೆ;" ಎಂದು ಹೇಳುವ ಭವಿಷ್ಯೋತ್ತರ ಪುರಾಣದ ವಾಕ್ಯಗಳೂ ಬೆಳಕಿಗೆ ಬಂದವು! ತ್ರಿಕಾಲದರ್ಶಿಗಳೂ ಅಪ ರೋಕ್ಷಜ್ಞಾನಿಗಳೂ ಆದ ಭಾರತೀಯ ಋಷಿವರರಿಂದ ಬಂದ ವೇದ– ಪುರಾಣಾದಿಗಳಲ್ಲಿ ಯುರೋಪ, ಅಮೇರಿಕೆಯು ಮಾಡಿದ ಮತ್ತು ಮಾಡುವ ಯಾವುದೇ ಬಗೆಯ ಸಂಶೋಧನ ಹೊಸ ವಿಚಾರ ತತ್ವಗಳಿಗೆ ಆಧಾರವು ದೊರೆಯದೆ ಇರುವ ಸಂಭವವೇ ಇಲ್ಲ ಕೆಲವಕ್ಕೆ ಆಧಾರ ಇನ್ನೂ ದೊರೆ ತಿಲ್ಲವಾದರೆ ಅದು ನಮ್ಮ ಜನಗಳ ಅಜ್ಞಾನ ಅಥವಾ 'ಅನಂತಾ ವೈ ವೇದಾಃ;' ಕೆಲವು ವೇದಗಳು ಕಳೆದುಹೋಗಿವೆ. ಅವು ಬಿಳಿಯರಿಗೆ ದೊರೆತಿರಲಿಕ್ಕೆ ಸಾಕು. ಇಲ್ಲವಾದರೆ ಅವರ ಜ್ಞಾನವು ಇಷ್ಟು ಅಭಿವೃದ್ಧಿ ಹೊಂದುತ್ತಿದ್ದಿಲ್ಲ. ಪೂರ್ಣ ಸತ್ಯವನ್ನು ಆಕಲನಮಾಡಿ ಸಾಕ್ಷಾತ್ಕರಿಸಿ ಕೊಂಬುವ ಸಾಮರ್ಥ್ಯವುಳ್ಳ ಆ ಪರಿಪೂರ್ಣ ಯುಗದಲ್ಲಿ ನಮ್ಮ ಆ ಗ್ರಂಥ ಗಳು ನಿರ್ಮಾಣವಾಗಿವೆ. ಕೃತಯುಗದ ಅಂತಹ ಆ ಪೂರ್ಣ ಜ್ಞಾನಿಗಳಾದ

ಋಷಿಗಳ ಕುಲ ಹಿಂದೆ ಆಗಿಲ್ಲ; ಮುಂದೆ ಆಗುವಂತಿಲ್ಲ; ಎಂಬ ಇನ್ನೊಂದು ಬಗೆಯ ಜನಾಂಗವಾದ, ಮಾನವರ ಪರಿಣತ ಸ್ಥಿತಿಯ ಗ್ರಹಿಕೆಯು ಹಿಂದೂ ದೇಶದಲ್ಲಿ ತಲೆತಲಾಂತರಗಳಿಂದ ಸಾಗಿಬಂದುದು ಗೋಚರವಾಗುತ್ತದೆ. ಈ ಬಗೆಯ ನೆಮ್ಮುಗೆಯು ಪಾರತಂತ್ರ್ಯದ ಘೋರವಾದ ಅಂಧಃಕಾರದೊಳಗಿಂದ ಪಾರಿ ಸಾಗುವಾಗ ಭಾರತೀಯರಿಗೆ ಸ್ವತ್ವವನ್ನು ಕಾಯ್ದುಕೊಳ್ಳಲು ಉಪಯುಕ್ತವಾದುದೂ ನಿಜ. ಈ ಪ್ರಕಾರದ ಆತ್ಮವಿಶ್ವಾಸದ ಹುಚ್ಚು ಇದ್ದಿಲ್ಲವಾಗಿದ್ದರೆ ಮಹಮ್ಮದೀಯರ ಆಘಾತಕ್ಕೆ ಒಳಗಾಗಿ ಅಂತಹ ಭಯಾನಕ ಸಂಕಟಕ್ಕೀಡಾದ ಹಿಂದುತ್ವವು ಇಂದು ಜೀವದಿಂದ ಉಳಿಯುತ್ತಿದ್ದಿಲ್ಲ. ಬ್ರಿಟಿಶರ ಆಡಳಿತದಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಯ ಆಕರ್ಷಣಕ್ಕೂ ಪೂರ್ಣ ಬಗ್ಗದಿರಲು ಜನದೊಳಗಿನ ಈ ಬಗೆಯ ನೆಚ್ಚಿಕೆಯೆ ಮುಖ್ಯ ಕಾರಣ.

ಈ ಪರಿಗೆ ವಿವರಿಸಿದ ಮೇರೆಗೆ ಲೋಕದಲ್ಲಿ ಪ್ರಗತಿವಾದದ ಕ್ರಿಯೆ ಪ್ರತಿಕ್ರಿಯೆಗಳು ನಡೆದಿರಲು, ಥಿಯಾಸಫಿಯವರು ತಮ್ಮ ರೀತಿಯಲ್ಲಿ ಈ ವಿಚಾರದ ಬೆಳವಣಿಗೆಗೆ ತಮ್ಮ ಒಂದು ಕಾಣಿಕೆಯನ್ನು ಸಲ್ಲಿಸಿದರು. ಮಾನವರ ಪ್ರಗತಿಯು ಇನ್ನು ಮುಂದಿನ ಘಟ್ಟವೆಂದರೆ, ದೇವಮಾನವ ಸಮಾಜದ ಉದಯ, ಎಂದು ಆ್ಯನಿಬೆಸಂಟಮ್ಮನವರು ತಮ್ಮ ದಿವ್ಯ ಸಂದೇಶವನ್ನು ಅರುಹಿದರು. ಋಷಿಗಳ ಅವತಾರವಾಗಲಿದೆ. ಮೈತ್ರೇಯ ಮುನಿಯು ಕೃಷ್ಣಮೂರ್ತಿಯೆಂಬ ಬಾಲಕನಲ್ಲಿ ಪ್ರವೇಶಿಸಲಿದ್ದಾನೆ. ಈ ಬಾಲಕನೇ ಸತ್ಯದೃಷ್ಟಾರನಾಗಿ ನಾಳಿನ ಯುಗದ ನೇತಾರನಾಗುವನೆಂದು ಸಾರಿದರು. ಲೋಕವು ಕೃಷ್ಣಮೂರ್ತಿಯ ದಿವ್ಯಾಗಮನವನ್ನು ಉತ್ಸುಕತೆಯಿಂದ ಎದುರು ನೋಡಲಾರಂಭಿಸಿತು. ಸತ್ಯದ ಸಾಕ್ಷಾತ್ಕಾರವನ್ನು ಪಡೆವ ದೇವಮಾನವರ ಸಂಘ ನಿರ್ಮಾಣದ ಪೂರ್ವ ಸಿದ್ಧತೆಯೂ ಆಯ್ತು. ಆದರೆ ಕೃಷ್ಣಮೂರ್ತಿಯವರು ಮುಂದೆ ತಮ್ಮ ಅಮೋಘ ವಿಚಾರದಿಂದ ಮಾಡಿದ ಪವಾಡವೇ ಬೇರೆ! ಲಕ್ಷಾವಧಿ ರೂಪಾಯಿಗಳ ವಾರ್ಷಿಕ ಉತ್ಪನ್ನದರುವ ಆಸ್ತಿಯ ವೈಭವವನ್ನೂ ಯುರೋಪ, ಅಮೇರಿಕಾ, ಆಸ್ಟ್ರೇಲಿಯಾದಿ ಪಶ್ಚಿಮಾತ್ಯ ದೇಶದ ಮಹಾ ಮಹಾ ವ್ಯಕ್ತಿಗಳಿಂದ ಶಿಷ್ಯರೆಂದು ದೊರೆಯುತ್ತಿದ್ದ ಪಾದಸೇವೆಯ ಸೌಭಾಗ್ಯವನ್ನೂ ಕಾಲಕಸಕ್ಕಿಂತ

ಡಿಮೆಯೆಂಬಂತೆ ಎಲ್ಲದಕ್ಕೂ ತ್ಯಾಗಪತ್ರವನ್ನು ಬರೆದುಕೊಟ್ಟರು. ಸತ್ಯದ
ಅತ್ತಿಗೆಯು ಒಂದು ವ್ಯಕ್ತಿಗೆ ದೊರೆತಿದೆ, ಒಂದು ವ್ಯಕ್ತಿಯ ಕೈಗೆ ಸಿಕ್ಕಿದೆ
ಎಂದು ಬಗೆಯುವುದು ಸತ್ಯದ ಅಪಲಾಪ; ಸತ್ಯದ ಅಪಮಾನ. ಯಾವ
ಪಕ್ಷದ ಪಕ್ಷಪಾತವೂ ಸತ್ಯಕ್ಕೆ ಇಲ್ಲ ವ್ಯಕ್ತಿಗಳು ತಮ್ಮ ಪರಿಶ್ರಮದಿಂದ
ಸದಾ ಸತ್ಯದ ಅನುಸಂಧಾನದಲ್ಲಿದ್ದು ಅದನ್ನು ಅರಿತುಕೊಳ್ಳಲು ಸಾಧನ
ನಡೆಸಬೇಕಲ್ಲದೆ ಅದಕ್ಕಾಗಿ ಪಕ್ಷ-ಪಂಥಗಳನ್ನು ಕಟ್ಟುವುದೆಂದರೆ ಸತ್ಯದಿಂದ
ದೂರ ಹೊರಟಂತೆಯೆ ಸರಿ ಶ್ರೀಕೃಷ್ಣಜೀಯವರು ಈ ತೆರನಾಗಿ ತಮ್ಮ
ಅಭಿಪ್ರಾಯವನ್ನು ಲೋಕದ ಮುಂದಿಟ್ಟು, ಡಾ. ಬೆಸೆಂಟಮ್ಮನವರು
ಕೊಳಹು ಹಾಕಿದ ಸತ್ಯದರ್ಶಿಗಳ, ಆಗಾಮಿ ದೇವಮಾನವರ ಸಂಘವನ್ನು
ವಿಸರ್ಜಿಸಿಬಿಟ್ಟರು. ಅಥವಾ ಅವರಿಂದ ತಾವು ಮುಕ್ತರಾದರೆಂದರೂ ಸರಿ.

ಥಿಯಾಸಫಿಯುಪರಿಂದ ಚಾಲನೆ ದೊರೆತು ಬಳಿಕ ಅರ್ಥಕ್ಕೆ ನಿಂತ
ದೇವಮಾನವರ ಉದಯದ ವಿಚಾರವು, ಮುಂದೆ ಶ್ರೀ ಅರವಿಂದರಲ್ಲಿ
ಪ್ರಕರ್ಷಗೊಂಡು ವಿಶೇಷ ರೀತಿಯಲ್ಲಿ ಅಭಿವ್ಯಕ್ತವಾಗಿದೆ ಇಷ್ಟೇ ಅಲ್ಲ.
ಯುರೋಪದಲ್ಲಿ ತಲೆದೋರಿದ ಮಾನವ ವಿಕಾಸದ ಅನೇಕ ವಿಚಾರ ಪ್ರಣಾಲಿ
ಗಳನ್ನೂ ಶ್ರೀ ಅರವಿಂದರು ತಮ್ಮ ಲೇಖನಗಳಲ್ಲಿ ಬಳಸಿದ್ದುಂಟು.
೧೯೦೫-೬ರ ರಾಷ್ಟ್ರೀಯ ಆಂದೋಲನದ ಕಾಲಕ್ಕೆ ಶ್ರೀ ಅರವಿಂದರು 'ಕರ್ಮ
ಯೋಗಿ' ಎಂಬ ವಾರಪತ್ರಿಕೆಯ ಸಂಪಾದಕರಾಗಿದ್ದರು. ಆಗಿನ ಚಳವಳಿ
ಯಲ್ಲಿ ಬಂಗಾಳ ಪ್ರಾಂತವು ಅಗ್ರಸ್ಥಾನದಲ್ಲಿತ್ತು. ಬಂಗಾಳದಿಂದಲೇ
ಭಾರತಕ್ಕೆ ಸ್ವರಾಜ್ಯವು ದೊರೆಯತಕ್ಕುದೆಂದು ದೇವರ ಸಂಕಲ್ಪವಿದೆ
ಎಂದು ಶ್ರೀ ಅರವಿಂದರು ಒಂದು ಸ್ಫೂರ್ತಿದಾಯಕ ಪ್ರಚೋದಕ ಲೇಖನ
ದಲ್ಲಿ ಹೇಳಿದ್ದಾರೆ ! 'ಭಾರತೀಯರಿಂದಲೇ ಮಾನವ ಕುಟುಂಬದ ಉದ್ಧಾರ;
ಹಿಂದೂ ಸಂಸ್ಕೃತಿಯು ಜಗತ್ತಿನಲ್ಲಿ ಶ್ರೇಷ್ಠ; ಇದರ ಪ್ರಸಾರದಿಂದಲೇ
ಲೋಕದಲ್ಲಿ ಶಾಂತಿ ಸುಖವು ಬಂದೀತು;' ಈ ತೆರನಾದ ಉದ್ಗಾರಗಳು
ಅನೇಕರ ಬಾಯಲ್ಲಿ ಈಗ ಕೇಳಬರುತ್ತವೆ. ಇವೆಲ್ಲವೂ ಜನಾಂಗದ
ಮೇಲ್ಮೆಯ ಹೆಮ್ಮೆಯ ಮಾತುಗಳು. ಜರ್ಮನಿಯ ಹೇಗೆಲ್‌ನ ವಿಚಾರಕ್ಕೂ
ಇಟಲಿಯ ಆಧುನಿಕ ತತ್ವಜ್ಞ ಬೆನೆಡಿಟೊ ಕ್ರೋಚೆ ಎಂಬಾತನ ವಿಚಾರಕ್ಕೂ
ಹೊರವಲಯದಲ್ಲಿ ಸ್ಥೂಲವಾದ ಹೋಲಿಕೆಯಿದೆ. ಆದರೂ ಕ್ರೋಚೆಯ

ಋಷಿಗಳ ಕುಲ ಹಿಂದೆ ಆಗಿಲ್ಲ; ಮುಂದೆ ಆಗುವಂತಿಲ್ಲ; ಎಂಬ ಇನ್ನೊಂದು ಬಗೆಯ ಜನಾಂಗವಾದ, ಮಾನವರ ಪರಿಣತ ಸ್ಥಿತಿಯ ಗ್ರಹಿಕೆಯು ಹಿಂದೂ ದೇಶದಲ್ಲಿ ತಲೆತಲಾಂತರಗಳಿಂದ ಸಾಗಿಬಂದುದು ಗೋಚರವಾಗು ತ್ತದೆ. ಈ ಬಗೆಯ ನೆಮ್ಮುಗೆಯು ಪಾರತಂತ್ರ್ಯದ ಘೋರವಾದ ಅಂಧಃ ಕಾರದೊಳಗಿಂದ ಪಾರಿ ಸಾಗುವಾಗ ಭಾರತೀಯರಿಗೆ ಸ್ವತ್ವವನ್ನು ಕಾಯ್ದು ಕೊಳ್ಳಲು ಉಪಯುಕ್ತವಾದುದೂ ನಿಜ. ಈ ಪ್ರಕಾರದ ಆತ್ಮವಿಶ್ವಾಸದ ಹುಚ್ಚು ಇದ್ದಿಲ್ಲವಾಗಿದ್ದರೆ ಮಹಮ್ಮದೀಯರ ಆಘಾತಕ್ಕೆ ಒಳಗಾಗಿ ಅಂತಹ ಭಯಾನಕ ಸಂಕಟಕ್ಕೀಡಾದ ಹಿಂದುತ್ವವು ಇಂದು ಜೀವದಿಂದ ಉಳಿಯು ತ್ತಿದ್ದಿಲ್ಲ. ಬ್ರಿಟಿಶರ ಆಡಳಿತದಲ್ಲಿ ಪಾಶ್ಚಿಮಾತ್ಯ ಸಂಸ್ಕೃತಿಯ ಆಕರ್ಷಣಕ್ಕೂ ಪೂರ್ಣ ಬಗ್ಗದಿರಲು ಜನದೊಳಗಿನ ಈ ಬಗೆಯ ನೆಚ್ಚಿಕೆಯೆ ಮುಖ್ಯ ಕಾರಣ.

ಈ ಪರಿಗೆ ವಿವರಿಸಿದ ಮೇರೆಗೆ ಲೋಕದಲ್ಲಿ ಪ್ರಗತಿವಾದದ ಕ್ರಿಯೆ ಪ್ರತಿಕ್ರಿಯೆಗಳು ನಡೆದಿರಲು, ಥಿಯಾಸಫಿಯವರು ತಮ್ಮ ರೀತಿಯಲ್ಲಿ ಈ ವಿಚಾರದ ಬೆಳೆವಣಿಗೆಗೆ ತಮ್ಮ ಒಂದು ಕಾಣಿಕೆಯನ್ನು ಸಲ್ಲಿಸಿದರು. ಮಾನವರ ಪ್ರಗತಿಯ ಇನ್ನು ಮುಂದಿನ ಘಟ್ಟವೆಂದರೆ, ದೇವಮಾನವ ಸಮಾಜದ ಉದಯ, ಎಂದು ಆ್ಯನಿಬೆಸಂಟಮ್ಮನವರು ತಮ್ಮ ದಿವ್ಯ ಸಂದೇಶವನ್ನು ಅರುಹಿದರು. ಋಷಿಗಳ ಅವತಾರವಾಗಲಿದೆ. ಮೈತ್ರೇಯ ಮುನಿಯು ಕೃಷ್ಣಮೂರ್ತಿಯೆಂಬ ಬಾಲಕನಲ್ಲಿ ಪ್ರವೇಶಿಸಲಿದ್ದಾನೆ. ಈ ಬಾಲಕನೇ ಸತ್ಯದೃಷ್ಟಾರನಾಗಿ ನಾಳಿನ ಯುಗದ ನೇತಾರನಾಗುವನೆಂದು ಸಾರಿದರು. ಲೋಕವು ಕೃಷ್ಣಮೂರ್ತಿಯ ದಿವ್ಯಾಗಮನವನ್ನು ಉತ್ಸುಕತೆ ಯಿಂದ ಎದುರು ನೋಡಲಾರಂಭಿಸಿತು. ಸತ್ಯದ ಸಾಕ್ಷಾತ್ಕಾರವನ್ನು ಪಡೆವ ದೇವಮಾನವರ ಸಂಘ ನಿರ್ಮಾಣದ ಪೂರ್ವ ಸಿದ್ಧತೆಯೂ ಆಯ್ತು. ಆದರೆ ಕೃಷ್ಣಮೂರ್ತಿಯವರು ಮುಂದೆ ತಮ್ಮ ಅಮೋಘ ವಿಚಾರದಿಂದ ಮಾಡಿದ ಪವಾಡವೇ ಬೇರೆ! ಲಕ್ಷಾವಧಿ ರೂಪಾಯಿಗಳ ವಾರ್ಷಿಕ ಉತ್ಪನ್ನವಿರುವ ಆಸ್ತಿಯ ವೈಭವವನ್ನೂ ಯುರೋಪ, ಅಮೇರಿಕಾ, ಆಸ್ಟ್ರೇಲಿಯಾದಿ ಪಾಶ್ಚಿಮಾತ್ಯ ದೇಶದ ಮಹಾ ಮಹಾ ವ್ಯಕ್ತಿಗಳಿಂದ ಶಿಷ್ಯ ರೆಂದು ದೊರೆಯುತ್ತಿದ್ದ ಪಾದಸೇವೆಯ ಸೌಭಾಗ್ಯವನ್ನೂ ಕಾಲಕಸಕ್ಕಿಂತ

ಕಡಿಮೆಯೆಂಬಂತೆ ಎಲ್ಲದಕ್ಕೂ ತ್ಯಾಗಪತ್ರವನ್ನು ಬರೆದುಕೊಟ್ಟರು. ಸತ್ಯದ ಗುತ್ತಿಗೆಯು ಒಂದು ವ್ಯಕ್ತಿಗೆ ದೊರೆತಿದೆ, ಒಂದು ವ್ಯಕ್ತಿಯ ಕೈಗೆ ಸಿಕ್ಕಿದೆ ಯೆಂದು ಬಗೆಯುವುದು ಸತ್ಯದ ಅಪಲಾಪ; ಸತ್ಯದ ಅಪಮಾನ. ಯಾವ ಪಕ್ಷದ ಪಕ್ಷಪಾತವೂ ಸತ್ಯಕ್ಕೆ ಇಲ್ಲ ವ್ಯಕ್ತಿಗಳು ತಮ್ಮ ಪರಿಶ್ರಮದಿಂದ ಸದಾ ಸತ್ಯದ ಅನುಸಂಧಾನದಲ್ಲಿದ್ದು ಅದನ್ನು ಅರಿತುಕೊಳ್ಳಲು ಸಾಧನ ನಡೆಸಬೇಕಲ್ಲದೆ ಅದಕ್ಕಾಗಿ ಪಕ್ಷ-ಪಂಥಗಳನ್ನು ಕಟ್ಟುವುದೆಂದರೆ ಸತ್ಯದಿಂದ ದೂರ ಹೊರಟಂತೆಯೆ ಸರಿ ಶ್ರೀಕೃಷ್ಣಜೀಯವರು ಈ ತೆರನಾಗಿ ತಮ್ಮ ಅಭಿಪ್ರಾಯವನ್ನು ಲೋಕದ ಮುಂದಿಟ್ಟು, ಡಾ. ಬೆಸೆಂಟಮ್ಮನವರು ಹೊಳಹು ಹಾಕಿದ ಸತ್ಯದರ್ಶಿಗಳ, ಆಗಾಮಿ ದೇವಮಾನವರ ಸಂಘವನ್ನು ನಿಲ್ಲಿಸಿಬಿಟ್ಟರು. ಅಥವಾ ಅವರಿಂದ ತಾವು ಮುಕ್ತರಾದರೆಂದರೂ ಸರಿ.

ಥಿಯಾಸಫಿಯವರಿಂದ ಚಾಲನೆ ದೊರೆತು ಬಳಿಕ ಅರ್ಧಕ್ಕೆ ನಿಂತ ದೇವಮಾನವರ ಉದಯದ ವಿಚಾರವು, ಮುಂದೆ ಶ್ರೀ ಅರವಿಂದರಲ್ಲಿ ಪ್ರಕರ್ಷಗೊಂಡು ವಿಶೇಷ ರೀತಿಯಲ್ಲಿ ಅಭಿವ್ಯಕ್ತವಾಗಿದೆ ಇಷ್ಟೇ ಅಲ್ಲ. ಯುರೋಪದಲ್ಲಿ ತಲೆದೋರಿದ ಮಾನವ ವಿಕಾಸದ ಅನೇಕ ವಿಚಾರ ಪ್ರಣಾಲಿ ಗಳನ್ನೂ ಶ್ರೀ ಅರವಿಂದರು ತಮ್ಮ ಲೇಖನಗಳಲ್ಲಿ ಬಳಸಿದ್ದುಂಟು. ೧೯೦೫-೬ರ ರಾಷ್ಟ್ರೀಯ ಆಂದೋಲನದ ಕಾಲಕ್ಕೆ ಶ್ರೀ ಅರವಿಂದರು 'ಕರ್ಮ ಯೋಗಿ' ಎಂಬ ವಾರಪತ್ರಿಕೆಯ ಸಂಪಾದಕರಾಗಿದ್ದರು. ಆಗಿನ ಚಳವಳಿ ಯಲ್ಲಿ ಬಂಗಾಳ ಪ್ರಾಂತವು ಅಗ್ರಸ್ಥಾನದಲ್ಲಿತ್ತು. ಬಂಗಾಳದಿಂದಲೇ ಭಾರತಕ್ಕೆ ಸ್ವರಾಜ್ಯವು ದೊರೆಯತಕ್ಕುದೆಂದು ದೇವರ ಸಂಕಲ್ಪವಿದೆ ಎಂದು ಶ್ರೀ ಅರವಿಂದರು ಒಂದು ಸ್ಫೂರ್ತಿದಾಯಕ ಪ್ರಚೋದಕ ಲೇಖನ ದಲ್ಲಿ ಹೇಳಿದ್ದಾರೆ ! 'ಭಾರತೀಯರಿಂದಲೇ ಮಾನವ ಕುಟುಂಬದ ಉದ್ಧಾರ; ಹಿಂದೂ ಸಂಸ್ಕೃತಿಯು ಜಗತ್ತಿನಲ್ಲಿ ಶ್ರೇಷ್ಠ; ಇದರ ಪ್ರಸಾರದಿಂದಲೇ ಲೋಕದಲ್ಲಿ ಶಾಂತಿ ಸುಖವು ಬಂದೀತು;' ಈ ತೆರನಾದ ಉದ್ಗಾರಗಳು ಅನೇಕರ ಬಾಯಲ್ಲಿ ಈಗ ಕೇಳಬರುತ್ತವೆ. ಇವೆಲ್ಲವೂ ಜನಾಂಗದ ಮೇಲ್ಮೆಯ ಹೆಮ್ಮೆಯ ಮಾತುಗಳು. ಜರ್ಮನಿಯ ಹೇಗೆಲ್‌ನ ವಿಚಾರಕ್ಕೂ ಇಟಲಿಯ ಆಧುನಿಕ ತತ್ವಜ್ಞ ಬೆನೆಡಿಟೊ ಕ್ರೋಚೆ ಎಂಬಾತನ ವಿಚಾರಕ್ಕೂ ಹೊರವಲಯದಲ್ಲಿ ಸ್ಥೂಲವಾದ ಹೋಲಿಕೆಯಿದೆ. ಆದರೂ ಕ್ರೋಚೆಯ

ಪ್ರತಿಪಾದನಾಪದ್ಧತಿಯು ನಿರ್ಣಯಕ್ಕೆ ಬಂದ ರೀತಿ ಬೇರೆ ಶ್ರೀ ಅರ
ವಿಂದರು ತಮ್ಮ ತತ್ವಜ್ಞಾನದಲ್ಲಿ ಹೆಗೆಲ್‌ನಿಂದ ಕ್ರೋಚೆಯ ವರೆಗಿನ ಎಲ್ಲ
ವಿಚಾರಗಳನ್ನೂ ಅಳವಡಿಸಿಕೊಂಡಿದ್ದಾರೆ.

ವಿಕಾಸವೇ ವಿಶ್ವದ ಗುರಿ. ವ್ಯಕ್ತಿಯ ಇಚ್ಛೆ ಇರಲಿ, ಇಲ್ಲದಿರಲಿ;
ಈಶಪ್ರೇರಣೆಯಿಂದ ವಿಶ್ವವಿಕಾಸವು ಅವ್ಯಾಹತವಾಗಿ ನಡೆದಿದೆ ಮುಂದೆಯೂ
ನಡೆಯುವುದು. ಇದನ್ನರಿತು ವ್ಯಕ್ತಿಯು ಸ್ವಯಂಪ್ರಜ್ಞೆಯಿಂದ ವಿಶ್ವ
ಸಂಚಾಲಕ ಶಕ್ತಿಯ ಗುರಿಗೆ ಪೋಷಕವಾಗಿ ತನ್ನ ನಡೆವಳಿಯನ್ನು ತಿದ್ದಿ
ಕೊಂಡರೆ ಸರಿ ಅದುವೆ ಯೋಗ್ಯವೆನಿಸುವುದು ಇದಕ್ಕೆ ವಿಪರೀತವಾಗಿ
ನಡೆದರೆ ಅವನು ತನ್ನ ಹಾನಿಗೇ ಕಾರಣನಾಗುವನು ವಿಶ್ವಶಕ್ತಿಯು
ಒತ್ತಾಯದಿಂದ ಅವನನ್ನು ಶಿಕ್ಷಿಸಿ ದಾರಿಗೆ ತರುವುದೆಂದು ಶ್ರೀ ಅರವಿಂದರ
ಅಭಿಪ್ರಾಯ. ವಿಕಾಸ ಕ್ರಮದಲ್ಲಿ ಮಾನವನು ಬುದ್ಧಿಯ ಪಾತಳಿಗೆ ಬಂದು
ನಿಂತಿದ್ದಾನೆ ಬುದ್ಧಿಯು ಪೃಥಕ್ಕರಣಶೀಲ. ಸತ್ಯಜ್ಞಾನಕ್ಕೆ ನಿರುಪಯುಕ್ತ.
ವ್ಯವಸಾಯಾತ್ಮಿಕಾಬುದ್ಧಿಯ ಆಚೆಗೆ ಅತೀಂದ್ರಿಯ ಶಕ್ತಿಯಿದೆ ಅದನ್ನು
ಪಡೆದುಕೊಂಡರೆ ಅಂತರ್‌ಜ್ಞಾನದಿಂದ ಸತ್ಯವನ್ನ ಪ್ರತ್ಯಕ್ಷ ಕಾಣುವ
ಸಾಮರ್ಥ್ಯವುಂಟಾಗುವುದು. ಹಿಂದಿನ ಋಷಿಗಳಲ್ಲಿ ಈ ಶಕ್ತಿಯಿತ್ತು ಅದು
ಕ್ವಚಿತ್ತಾಗಿ ಕೆಲವರಿಗೆ ಮಾತ್ರ ಲಭಿಸಿತ್ತು. ಮಾನವ ವಿಕಾಸವು ದೈವೀ
ಸಂಕಲ್ಪ. ಅದಕ್ಕನುಸರಿಸಿ ಮಾನವಲೋಕದ ಕ್ಷಿತಿಜದ ಮೇಲೆ ಇದೀಗ
ಅದು ಮೂಡಿ ಮಿನುಗಲಾರಂಭಿಸಿದೆ. ಅದನ್ನು ಲೋಕಕಲ್ಯಾಣಕ್ಕಾಗಿ
ಭೂಮಿಗೆ ತಂದು ಮಾನವರಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡುವುದೇ ತಮ್ಮ
ತಪಸ್ಸಿನ ಧ್ಯೇಯ; ಎಂದು ಶ್ರೀ ಅರವಿಂದರೂ ಅವರ ಪರವಾಗಿ ಅವರ
ಹಲವು ಶಿಷ್ಯರೂ ಸಾರುತ್ತಲಿದ್ದಾರೆ.

ಸಮಾಜವಿಕಾಸ ಮೀಮಾಂಸೆಯನ್ನು ಕುರಿತು ಶ್ರೀ ಅರವಿಂದರು
ಆರ್ಯದಲ್ಲಿ ಒಂದು ಲೇಖಮಾಲೆಯನ್ನು ಬರೆದಿದ್ದಾರೆ ಆದರಲ್ಲಿ ಸ್ಪೆಂಗ್ಲರನ
ಪ್ರತಿಪಾದನೆಯ ಅಗಾಧತೆ ಅಥವಾ ವಿವಿಧತೆಯು ಇಲ್ಲವಾದರೂ ಭಾರತೀ-
ಯತ್ವದ ಅಭಿಮಾನದಿಂದ ನಮ್ಮ ಪೂರ್ವಜರ ವಿಚಾರಗಳನ್ನು ಆಧುನಿಕ
ರೀತಿಯಿಂದ ಪುಷ್ಟೀಕರಿಸಿ, ಕೌಶಲ್ಯದಿಂದ ಅವುಗಳ ಸಮರ್ಪಕತೆಯನು

ಸಿದ್ಧಪಡಿಸಿದ್ದು ಅರ್ಥದೊಳಗಿನ ಈ ಬಗೆಯ ವಿಚಾರಗಳು ಹಿಂದೀಯರಿಗೆ ವಿಶೇಷ ಸತ್ಯವೆನಿಸುವಂತಿವೆ ಹಾಗಾದರೆ ಸತ್ಯದಲ್ಲಿ ಹಿಂದೀಯರ ಸತ್ಯ-ಯುರೋಪಿಯರ ಸತ್ಯ ಎಂದು ಮುಂತಾಗಿ ಜಾತಿ-ಮತ-ದೇಶಗಳಿಗೊಂದೊಂದು ಸತ್ಯವು ಬೇರೆಬೇರೆಯುಂಟೆ?

ಕಳೆದ ಎರಡೂ ಮಹಾ ಯುದ್ಧಗಳ ಆಸುರೀಪ್ರಕಾರಗಳನ್ನೂ ಅವುಗಳಲ್ಲಿ ವಿಜಯ ಸಂಪಾದಿಸಿದ ಬಗೆಗಳನ್ನೂ ನೋಡಿದವರಿಗೆ ಇಂತಹ ಕೃತ್ಯಗಳನ್ನು ದೇವರೇ ಹಿಂದೆ ನಿಂತು ಮಾಡಿಸುತ್ತಿದ್ದಾನೆ; 'ಸತ್ಯಮೇವ ಜಯತೇ' ಎಂಬೀ ಬಗೆಯಾದ ಮಾತುಗಳನ್ನು ಪ್ರಾಮಾಣಿಕವಾಗಿ ಎಷ್ಟರ ಮಟ್ಟಿಗೆ ಮತ್ತು ಯಾವ ಅರ್ಥದಿಂದ ನೆಮ್ಮಬೇಕೊ ತಿಳಿಯದಾಗುತ್ತದೆ. 'ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ;' ಆಗ ತಾನು ಅವತಾರ ತಾಳುವೆನೆಂದು ಭಗವಂತನು ವಚನಕೊಟ್ಟಿಲ್ಲವೆ? ಪಾಂಡವರಿಗಾಗಿ ಕೃಷ್ಣಾವತಾರವಾಗಲಿಲ್ಲವೆ? ಶರಣರ ಉದ್ಧಾರ ಮಾಡಿಲ್ಲವೆ? ಪಾಪ ಹೆಚ್ಚಾದಾಗ ದೇವರು ಬರುವನಲ್ಲ; ಕಾರಣ ಪಾಪ ಹೆಚ್ಚು ಮಾಡಿರೆಂದು ಹೇಳುವ ಮಹಾಮಹಿಮರೂ ಆಗದೆ ಇಲ್ಲ! ಸಾಮಾನ್ಯವಾಗಿ ಮಾನವನು ಪುಕ್ಕನೂ ಮೈಗಳ್ಳ ಜೀವಗಳ್ಳನೂ ಆಗಿರುವುದರಿಂದ ತನ್ನ ಈ ಕೊರತೆಯಿಂದಾಗುವ ಮನಸ್ತಾಪವನ್ನು ಕಡಿಮೆ ಮಾಡಿಕೊಳ್ಳಲು ಕೆಲವೊಂದ ಭ್ರಾಂತಿಯಲ್ಲಿರಲು ಹಂಬಲಿಸುತ್ತಾನೆ. ಭ್ರಮೆಯಲ್ಲಿದ್ದು ಆತ್ಮವಂಚನೆ ಮಾಡಿಕೊಳ್ಳುವಲ್ಲಿ ಆತನಿಗೆ ತೃಪ್ತಿ! ಈ ಬಗೆಯ ತೃಪ್ತಿಗೇ ಸಂ-ಭ್ರಮವೆಂಬ ಹೆಸರು. ಮಾನವನು ಸಂಭ್ರಮಿ.

ಎಲ್ಲವನ್ನೂ ದೇವರು ಮಾಡಿಸುತ್ತಾನೆ, ಎಂದರೆ ಮಾನವನಿಗೆ ಸಂಭ್ರಮ. ವಿಕಾಸವಾಗುತ್ತಲಿದೆ; ಪ್ರಗತಿಯು ನಿಶ್ಚಿತ; ನಮ್ಮಉದ್ಧಾರಕ್ಕಾಗಿ ದೇವರು ಸಿದ್ಧನಾಗಿ ನಿಂತಿದ್ದಾನೆ; ಎಂಬ ಭ್ರಮೆಯು ಅಧಃಪಾತದ ಹೆದರಿಕೆಯಿಂದ ತಪ್ಪಿಸಿಕೊಳ್ಳಲು ಬಹಳ ಚೆನ್ನಾದ ಹಂಚಿಕೆ. ಅಂತರಾತ್ಮನ ಕೊರಲಗಿನ ಆಘಾತಗಳ ಆಂತರಿಕ ವೇದನೆಗಳಿಂದ ಪಾರಾಗಲು ದೈವವಾದ ಅಥವಾ ನಿಯತಿವಾದವು ಒಂದು ವಜ್ರಕವಚವೆ ಆಗಿದೆ. ಹಣೇಬರೆಹ ಅಥವಾ ದೈವದಲ್ಲಿದ್ದುದನ್ನು ತಪ್ಪಿಸುವವರಾರು? ಆದಕಾರಣ (ಸತ್ಕೃತ್ಯ?)

ದುಷ್ಕೃತ್ಯದ ಹೊಣೆ ಮಾನವನ ಮೇಲೆ ಎಳ್ಳಷ್ಟೂ ಉಳಿಯುವುದಿಲ್ಲ ಒಳ್ಳೆಯದಾಯ್ತು, ನಾ ಮಾಡಿದೆ; ಕೆಟ್ಟುದು ಒದಗಿತೊ, ಅದರ ಹೊಣೆ ದೈವದ ಮೇಲೆ; ಇದು ಮಾನವರ ಸಾಮಾನ್ಯ ರೀತಿ.

ಆದರೆ ಆಧುನಿಕ ಶಾಸ್ತ್ರೀಯ ಸಂಶೋಧನಗಳಿಂದ ಪೌರಾಣಿಕ ದೇವರ ಕಲ್ಪನೆಗಳೆಲ್ಲ ಕವಿಕಲ್ಪನೆಯೆಂಬ ಮಾತು ನಿದರ್ಶನಕ್ಕೆ ಬಂದಿದೆ. ಅವುಗಳಲ್ಲಿ ಏನೊಂದು ಸಂಕೇತಾರ್ಥವು ಅಡಕವಾಗಿದೆಯೆಂದು ಮನವರಿಕೆಯಾಗದೆ ಅವನ್ನು ಇದ್ದಕ್ಕಿದ್ದಂತೆ ನೆಚ್ಚಲು ಬುದ್ಧಿಯನ್ನು ಕುರುಡು ಮಾಡಿಕೊಳ್ಳ ಬೇಕಾಗುತ್ತದೆ. ಆಧುನಿಕ ಸಂಶೋಧನಗಳು ಹಳೆಯ ದೇವರ ತೇಜೋ ಭಂಗ ಮಾಡಿವೆ. ಮನುಷ್ಯನ ಮರ್ಯಾದೆಗೆ ಕೇಡುತಂದಿವೆ. ಹಿಂದಿನತಲೆ ಮಾರಿನವರ ದೇವರ ಕಲ್ಪನೆಯೆ ಅಗಾಧವಾಗಿತ್ತು ಮನೆಯೊಳಗಿನ ಪ್ರತಿ ಯೊಂದು ಕೆಲಸದಲ್ಲೂ ತನ್ನ ಮಾತು ನಡೆಸುವ ಹಟವಿದ್ದ ಆಗ್ರಹೀ ಯಜಮಾನನಂತೆ, ಆಡಳಿತೆಯ ಬೇಕಾನ ವ್ಯವಹಾರವನ್ನು ತನ್ನ ಮನ ಬಂದಂತೆ ಅಲ್ಲಟ-ಪಲ್ಲಟಮಾಡಿ ತನ್ನ ಅಧಿಕಾರ ದರ್ಪವನ್ನು ಲೋಕಕ್ಕೆ ಪ್ರದರ್ಶಿಸಿಕೊಂಬ ಚಪಲವಿದ್ದ ರಾಜ್ಯಾಧಿಕಾರಿಯಂತೆ, ಅಥವಾ ಊರ (ಅಥವಾ ನಾಡಿನ) ಯಾವ ಚಟುವಟಿಕೆಯೆ ಇರಲಿ, ಅದರಲ್ಲಿ ತನ್ನ ಮಾತು ನಡೆಯಲೇಬೇಕು, ಅದರ ಸೂತ್ರಗಳು ತನ್ನ ಕೈಯಲ್ಲಿಯೇ ಇರಬೇಕೆಂದು ಲವಲವಿಸುವ ದೇ-ಭಗಳಂತೆ, ನಮ್ಮ ದೇವರು (?) ಒಬ್ಬ ಅಧಿಕ ಪ್ರಸಂಗೀ ಪಾರುಪತ್ಯಗಾರನಂತೆ ವಿಘ್ನಕರ್ತೃವಾಗಿ, ಜನರನ್ನು ಹೆದರಿಸಿಕೊಂಡು, ವಿಘ್ನಹರ್ತೃವೆಂಬ ಆಶೆತೋರಿಸಿ, ಹಣ್ಣುಕಾಯಿಗಳ ಲಂಚತಿಂದು, ನಮ್ಮ ಪ್ರತಿಯೊಂದು ಜೀವನರಂಗದಲ್ಲಿಯೂ ಬಿಟ್ಟೂಬಿಡದೆ ಉಪದ್ರವ ಕೊಡು ತ್ತಿದ್ದುದನ್ನೊ, ಕಿಳ್ಳಿಮಾಡುತ್ತಿದ್ದುದನ್ನೊ ಅಥವಾ ಕೊಳ್ಳೆಹೊಡೆಯುತ್ತಿದ್ದು ದನ್ನೊ ಪುರಾಣ ಕತೆಗಳಿಂದ ಮನಗಾಣಬಹುದು ಇಂತಹ ಕತೆಗಳಿಂದ ತುಂಬಿದ ಭಾಗವತ ಪುರಾಣ, ಶರಣಲೀಲಾಮೃತ, ಸಂತಚರಿತ್ರೆ ಮೊದ ಲಾದವುಗಳ ಕೆಲವೊಂದು ಭಾಗವನ್ನು ಓದುವಾಗ ವಿಮರ್ಶಾಶಕ್ತಿಯನ್ನು ಕೊಂದುಕೊಂಡಲ್ಲದೆ, ಅಥವಾ ಅವುಗಳ ಮೇಲೆ ಆಧ್ಯಾತ್ಮಿಕ ಅರ್ಥದ ಹೊದಿಕೆಯನ್ನು ಹಾಕದೆ ಮೂಲ ರೂಪದಲ್ಲಿಯೆ ಆ ವಿಪರೀತ ವೃತ್ತಾಂತ ಗಳನ್ನು ಇದ್ದಕಿದ್ದ ಹಾಗೆಯೆ ಕಿವಿಯುವುದು ಮಹಾಪ್ರಯಾಸವೇ ಸರಿ.

ತಾವು ಬ್ರಹ್ಮನ ಮಾನಸಪುತ್ರರಾದ ಮಹರ್ಷಿಗಳ ವಂಶಜರೆಂದು ಕಲ್ಪಿಸಿಕೊಂಡು ಶ್ರೀಶ್ರೀಶ್ರೀ ಆದಿನಾರಾಯಣ→ಆತನ ಮಗ ಬ್ರಹ್ಮ.... ಎಂಬೀ ತೆರನಾಗಿ ತಮ್ಮ ಹೀಳಿಗೆಯನ್ನು ಪ್ರಾರಂಭಿಸಿಕೊಳ್ಳುವ ಹಕ್ಕು ತಮಗೆ ಮಾತ್ರ ಉಂಟು ಎಂದು ಕೊಬ್ಬಿ ಕೊನೆಯುತ್ತಲಿದ್ದ ಜನಗಳಿಗೆ ಡಾರ್ವಿನನ ಶೋಧದಿಂದ ತೀರ ಮುಖಭಂಗವಾಗಿರಲಿಕ್ಕೆ ಸಾಕು ಮಾನವರೆಲ್ಲ ಮಂಗನ ಮಕ್ಕಳು, ಎಂದು ಗ್ರಂಥವನ್ನು ಬರೆದು ತಮ್ಮ ಮಾನಗೇಡು ಮಾಡಿದನೆಂದು ಡಾರ್ವಿನನ ಮೇಲೆ ನಮ್ಮ ಮಠಪತಿಗಳು ಕೋರ್ಟಿನಲ್ಲಿ ವ್ಯಾಜ್ಯ ಹೂಡಬೇಕಾಗಿತ್ತು. ಹೂಡಲಿಲ್ಲ; ಇದು ಅವರ ಸೌಜನ್ಯಕ್ಕೆ, ವೈರಾಗ್ಯವೃತ್ತಿಗೆ ಒಪ್ಪುವಂತಹ ಮಾತಾಗಿದೆ.

ತಾನು ಮಾಡಿದ ಕಟ್ಟು-ಕಟ್ಟಳೆಗಳನ್ನು ತಾನೇ ಮುರಿವವನು ವಿವೇಕಿಯೆ? ಸಮಂಜಸನೆ? ವಿಚಾರಿಯೆ? ನ್ಯಾಯಿಯೆ? ಹಾಗಾದರೆ ಅತ್ಯಂತ ನ್ಯಾಯನಿಷ್ಠನೆಂದೂ ಜ್ಞಾನನಿಧಿಯೆಂದೂ ಬಗೆದ ದೇವರು, ತಾನೇ ರಚಿಸಿದ ವಿಶ್ವವ್ಯಾಪಾರದ ನಿಯಮಗಳಿಗೆ ವಿಪರೀತವಾಗಿ ನಡೆದುಕೊಳ್ಳುವನೆಂದು ಭಾವಿಸುವುದು ಯುಕ್ತವೆ? ಹಾಗೆ ವಿಪರೀತ ವೃತ್ತಿಯನ್ನು ದೇವರಲ್ಲಿ ಕಲ್ಪಿಸುವುದು, ನಮ್ಮ ಮನೋವೃತ್ತಿಯ ಪ್ರತಿಬಿಂಬವೆ ಆಗಿರಲಿಕ್ಕಿಲ್ಲವೆ? ಆದುದರಿಂದ ವಿಶ್ವವ್ಯಾಪಾರಗಳಿಗೆ ವಿರೋಧವಾಗಿ ನಡೆವ ವ್ಯಕ್ತಿಯು ಎಷ್ಟೇ ಮಹಾಮಹಿಮೆಯುಳ್ಳುದಾಗಿದ್ದರೂ ಅದು ಪರಮಾತ್ಮನಾಗಿರಲಾರದು; ಅದು ಪ್ರಯತ್ನಪೂರ್ವಕವಾಗಿ ಅತಿಮಾನುಷ ಶಕ್ತಿಯನ್ನು ಸಂಪಾದಿಸಿದ ಸುರಾಸುರರಲ್ಲಿ ಒಂದು ಪ್ರಾಣಿಯಾಗಿರಬೇಕು. ನಿಜವಾದ ವಿಶ್ವಪಿತನನ್ನು ಮರೆತಲ್ಲದೆ ಇಂತಹರನ್ನು ದೇವರೆಂದು ಒಪ್ಪಲು ವಿವೇಕವು ಎಂದೂ ಸಿದ್ಧವಾಗದು.

ಈ ಕಾರಣದಿಂದ ನಮ್ಮ ಅನುದಿನದ ವ್ಯಾಪಾರದಲ್ಲಿ ಸೃಷ್ಟಿಕರ್ತನನ್ನು ತಂದು ಆತನಿಗೆ ಕಲಂಕವನ್ನು ಹಚ್ಚದಿರುವುದೇ ಲೇಸು. ದುಡಿ – ಪಡೆ ಎಂಬುದು ಸೃಷ್ಟಿಯ ನಿಯಮ. ಗೀತೆಯ 'ಯದಾ ಯದಾ ಹಿ ಧರ್ಮಸ್ಯ....' ಎಂಬ ಶ್ಲೋಕವೇ ಜನಕ್ಕೆ ಬೇಗ ನೆನಪಾಗುತ್ತದೆ. ದೇವರು ಅವತಾರ

ತಾಳಿ ಉದ್ಧರಿಸುವನೆಂದು ಬಗೆದು ಆತನ ಮೇಲೆಯೇ ಕೈಯೂರಿ ಕುಳಿತು ಕೊಳ್ಳುವ ಪ್ರವೃತ್ತಿಯು ನಮ್ಮ ಷ್ಯೈಗಳ್ಳತನದ ದ್ಯೋತಕ. 'ಉದ್ಧರೇತ್ ಆತ್ಮನಾತ್ಮಾನಂ....' ನಿನ್ನ ಏಳ್ಗೆ ನಿನ್ನ ಕೈಯಲ್ಲಿದೆ; ನಿನ್ನ ಗೆಳೆಯನು ನೀನೇ; ನಿನ್ನ ಹಗೆಯೂ ನೀನೇ; ಎಂಬುದು ಮಾನವನ ಉದ್ಧಾರಕಮಂತ್ರ. 'ನ ಋತೇ ಶ್ರಾಂತಸ್ಯ ಸಖ್ಯಾಯ ದೇವಾಃ' ದುಡಿದು ದಣಿಯದವರಿಗೆ ದೇವರ ನೆರವು ಎಂದೂ ದೊರೆಯದು; ಎಂದೇ ಎಂದಿನಿಂದಲೂ ಜ್ಞಾನಿಗಳು ಹೇಳುತ್ತ ಬಂದಿದ್ದಾರೆ. ವಿಕಾಸವಾದವೆಂದರೆ ಸುಧಾರಣೆ, ಪೂರ್ಣತೆಯತ್ತ ಪ್ರಗತಿ ಎಂಬರ್ಥವಿದ್ದರೆ, ವಿಕಾಸದಲ್ಲಿ ನೆಚ್ಚಿಗೆ ಇದ್ದರೆ ವಿಶ್ವಸಂರಕ್ಷಕ ಈಶಶಕ್ತಿಯೊಂದು ಇದೆಯೆಂದು ಒಪ್ಪಿಕೊಳ್ಳಲೇಬೇಕಾಗುತ್ತದೆಂಬುದು ನಿಜ. ವಿಶ್ವಸಂಚಾಲಕ ಶಕ್ತಿಯಲ್ಲಿ ಶ್ರದ್ಧೆಯಿಲ್ಲದವರು ಸಮಾಜದ ವಿಕಾಸವೇ ಆಗುತ್ತದೆಯೆಂದು ಹೇಳುವುದು ಅಸಂಗತ. ಸಂರಕ್ಷಕ ಶಕ್ತಿಯಿಲ್ಲವಾದರೆ ಲೋಕವು ಪ್ರಗತಿಪಥದಲ್ಲಿಯೇ ಸಾಗೀತೆಂಬ ಭರವಸೆಯೇನು ? ಅದು ಏಳಲೂ ಬಹುದು; ಬೀಳಲೂ ಬಹುದು. ಸಂರಕ್ಷಕಶಕ್ತಿಯುಂಟೆಂದೂ ಅದು ವಿಶ್ವವನ್ನು ಪ್ರಗತಿಪಥದಲ್ಲಿ ನಡೆಸಿದೆಯೆಂದೂ ಶ್ರದ್ಧೆವಹಿಸಿದರೂ ಆ ಶಕ್ತಿಯು ತನ್ನ ಕಟ್ಟಳೆಗಳನ್ನು (ವಿಶ್ವವ್ಯಾಪಾರದ ನಿಯಮಗಳನ್ನು) ತಾನೇ ಅಲ್ಲಗಳೆಯುವುದೆಂದು ಬಗೆಯುವ ಕಾರಣವಿಲ್ಲ. 'ಅಧ್ಯಕ್ಷ'ನಾಗಿದ್ದು ಕೊಂಡು ಲೋಕದಿಂದಲೇ ಎಲ್ಲವೂ ಸಾಗುವಂತೆ ಏರ್ಪಾಟವಿದ್ದುದನ್ನು ವಿಶ್ವವ್ಯಾಪಾರದ ಸೂಕ್ಷ್ಮನಿರೀಕ್ಷಣೆಯಿಂದ ಕಂಡುಕೊಳ್ಳಬಹುದು. ಆದುದರಿಂದ ನಮ್ಮ ಕರ್ಮಕ್ಕೆ ನಾವೇ ಹೊಣೆ ಎಂಬುದು ಶಾಶ್ವತ ಸಿದ್ಧಾಂತ.

ಈ ಲೋಕದಲ್ಲಿ ಮಾನವನ ಸಂಸ್ಕೃತಿವಿಕಾಸದ ಕಾರ್ಯವು ಅಖಂಡವಾಗಿ ಅಲ್ಲದಿದ್ದರೂ ಒಂದು ಕ್ರಮದಲ್ಲಿ ಅದು ಸಾಗಿಯೇ ಇದೆ; ಎಂಬುದನ್ನು ಅಮೋಘವಾದ ರೀತಿಯಲ್ಲಿ ವಿಶದೀಕರಿಸಿ ಮನವರಿಕೆ ಮಾಡಿಕೊಡುವಲ್ಲಿ ಅತ್ಯಾಧುನಿಕನಾದ ಟಾಯಿನ್‌ಬಿಯು ದೇವರ ಹೆಸರನ್ನು ಎಲ್ಲಿಯೂ ಎತ್ತಿಲ್ಲ ಅದರ ಸ್ಥಾಪನೆಗೆ ದೇವರ ಹೆಸರಿನ ಉಪಯೋಗವನ್ನು ಅನವಶ್ಯಕವಾಗಿ ಎಲ್ಲಿಯೂ ಮಾಡಿಕೊಂಡಿಲ್ಲವೆಂದು ಹೇಳಿದರೆ ಯಾರಿಗೂ ಸೋಜಿಗವೆನಿಸುವ ಕಾರಣವೇ ಇಲ್ಲ. ಏಕೆಂದರೆ ದೇವರ ಹೆಸರನ್ನು ತಕ್ಕೊಳ್ಳದೇ

ಇರುವುದು ಅಷ್ಟೇ ಏಕೆ, ದೇವರೇ ಇಲ್ಲವೆಂದು ಔದ್ಧತ್ಯದಿಂದ ಪ್ರತಿಪಾದಿಸುವುದು ಆಧುನಿಕತೆಯ ಲಕ್ಷಣ; ಸುಶಿಕ್ಷಿತತನದ ಕುರುಹು. ಇಂದು ಇದೆ ಫ್ಯಾಶನ್ನು. ಆದುದರಿಂದ ಇತಿಹಾಸಶಾಸ್ತ್ರದ ಗಾಢವಾದ ಅಭ್ಯಾಸಿಯಾದ ಟಾಯಿನ್‌ಬಿಯು ಅನಂತಕಾಲದ ಜಾಗತಿಕ ಘಟನೆಗಳಲ್ಲಿ, ಮಾನವರ ಕರ್ತೃದ ಕಥೆಯ ಪೃಥಕ್ಕರಣ ವಿಮರ್ಶಾದಿಗಳಲ್ಲಿ ಇಂಥದು ದೇವರ ಕೈವಾಡ ಎಂದು ಹೇಳುವ ಆವಶ್ಯಕತೆಯೆನಿಸದೆ ಇದ್ದರೆ ಆಶ್ಚರ್ಯವಿಲ್ಲ

ಆದರೆ ೩೦೦೦—೪೦೦೦ ಸಾವಿರ ವರುಷಗಳ ಹಿಂದೆ! ಅದೂ ಭರತಖಂಡದಲ್ಲಿ! ದೇವರ ಹೆಸರನ್ನೇ ಎತ್ತದೆ ವಿಕಾಸದ ಸಿದ್ಧಾಂತವನ್ನು ಪ್ರತಿಪಾದಿಸಿದ್ದುಂಟು! ಹಲವು ರಾಯರು ಇದನ್ನು ಕಟ್ಟುಕತೆಯೆಂದು ತಿರಸ್ಕರಿಸಲಿಕ್ಕೂ ಸಂಕೋಚಪಡಲಿಕ್ಕಿಲ್ಲ ಆತನ ಹೆಸರು ಯಾಜ್ಞವಲ್ಕ್ಯ; ಆತನನ್ನು ಋಷಿಯೆಂದು ಬೇರೆ ಹೇಳುತ್ತಾರೆ! ಆತ್ಮನ ವಿಕಾಸದ ಸಿದ್ಧಾಂತವನ್ನು ವಿವರಿಸುವಾಗ ಯಾಜ್ಞವಲ್ಕ್ಯನು ಸೊನ್ನಗಾರನ ದೃಷ್ಟಾಂತವನ್ನು ಹೇಳಿದ್ದಾನೆ ಸೊನ್ನಗಾರನು ಒಮ್ಮೆ ಮಾಡಿದ ಅಲಂಕಾರವನ್ನು ಮರಳಿ ಇನ್ನೊಮ್ಮೆ ಮಾಡುವಾಗ ಆತನಿಗೆ ಹಿಂದಿನ ಅನುಭವದ ಬೆಳಕು ದೊರೆಯಲೇಬೇಕಲ್ಲವೆ? ಆದಕಾರಣ ಆತನಿಂದ 'ನವತರಂ, ಕಲ್ಯಾಣತರಂ' ಕೃತಿಯಾಗುವುದು ಸ್ವಾಭಾವಿಕ. ಅದರಂತೆ ಆತ್ಮಕ್ಕೂ ನಿನ್ನೆಯ ಅನುಭವವು ಇಂದು, ಇಂದಿನ ಅನುಭವವು ನಾಳೆಗೆ ವಿಕಾಸಕ್ಕೆ ಸಹಕಾರಿಯಾಗುತ್ತದೆ ಈ ತರ್ಕಪದ್ಧತಿಯು ಅತ್ಯಾಧುನಿಕ ಬುದ್ಧಿವಾದಿಯ ವಿಚಾರಸರಣಿಯೆಂದು ಸಂದೇಹಪಟ್ಟುಕೊಳ್ಳುವಷ್ಟು ನೂತನವಾಗಿಲ್ಲವೆ?

ಮಾನವರ ವಿಕಾಸವಾಗುತ್ತಿರುವುದು ನಿಶ್ಚಿತವೆಂದು ಸಾಮಾನ್ಯವಾಗಿ ಎಲ್ಲ ಶಾಸ್ತ್ರಜ್ಞರೂ ಒಪ್ಪುತ್ತಾರೆ. ಒಂದು ಶಿಖರವನ್ನು ಮುಟ್ಟಲು ಪರ್ವತವನ್ನು ಕ್ರಮಿಸುತ್ತಿರುವಾಗ ಕೆಲವು ಬಾರಿ ಇಳುಕಲು ಬಂದರೂ ಒಟ್ಟಿನಲ್ಲಿ ಏರಿಕೆಯಲ್ಲಿರುವುದೇ ನಿಜ. ಮಾನವ ಸಮಾಜದ ವಿಕಾಸಕ್ರಮವೂ ಇದೇ ತೆರನಾಗಿದೆ. ಜಾಗತಿಕ ದೃಷ್ಟಿಯಿಂದ ವಿಚಾರಿಸಿದಲ್ಲಿ ವ್ಯಕ್ತಿಗಳ ಅಥವಾ ಕೆಲವು ರಾಷ್ಟ್ರಗಳ ವೈಯಕ್ತಿಕ ಏರು ಇಳಿವಿನ ಲೆಕ್ಕವು ತೀರ ಅಲ್ಪ. ಇಡೀ ಮಾನವ ಕುಟುಂಬದ ಲೆಕ್ಕವೇ ಲೆಕ್ಕ. ಆ ದೃಷ್ಟಿಯಿಂದ ಒಟ್ಟಿನಲ್ಲಿ ಲೋಕದ ಪ್ರಗತಿಯೇ ಉಂಟೆಂದು ಒಪ್ಪಬೇಕಾಗುತ್ತದೆ.

ಆದರೆ ಉಪಮಾದಿ ಅಲಂಕಾರಗಳಿಂದ ಅಂದಗೊಳಿಸಿದ ವಿಷಯವು ತಿಳಿಯಲು ಸುಲಭವಾಗುವುದಾದರೂ (ಅರ್ಥದ) ನಿಜಸ್ವರೂಪವು ಕಾಣದೆ ಹೋಗಿ ಅಲಂಕಾರಗಳ ಹೊಳಪಿನಿಂದ ಬೇರೊಂದು (ಅರ್ಥದ) ಭ್ರಾಂತಿ ನಿರ್ಮಾಣವಾಗುವ ಹೆದರಿಕೆಯೆ ಹೆಚ್ಚು 'ಒಂದು ಶಿಖರವನ್ನು ಮುಟ್ಟಲು...' ಎನ್ನುವಲ್ಲಿ, ಪ್ರಗತಿಯಿಂದ ಸಂಸ್ಕೃತಿಯ ಒಂದು ಪರಮ ಉಚ್ಚಸ್ಥಿತಿಗೆ ನಾವು ಹೋಗಲಿರುವೆವೆಂಬ ಗ್ರಹಿಕೆಯಾಗುವ ಸಂಭವವಿದೆ. ಆದರೆ ಈ ಬಗೆಯ ಪರಿಪೂರ್ಣತೆಯ 'ಸ್ಥಿತಿ'ಯು ಮತ್ತು ಪ್ರ–'ಗತಿ' ಇವೆರಡೂ ಪರಸ್ಪರ ವಿಸಂಗತ ! ಪ್ರಗತಿಯು ಯಾವಾಗಲೂ ಸಾಪೇಕ್ಷ (relative). 'ನಾವು ಸುಧಾರಿಸಿದವರು;' ಅಥವಾ 'ನಮ್ಮ ಪ್ರಗತಿ ಯಾಗಿದೆ;' ಎಂಬುದು ನಿರಪೇಕ್ಷ ಸತ್ಯ (Absolute truth ಅಲ್ಲ. ಸಮಾಜವು ಯಾವಾಗಲೂ ಗತಿಶೀಲ. ಗಚ್ಛತಿ ಇತಿ ಜಗತ್. ಗತಿಯಲ್ಲಿರುವಂತಹದು - ಸ್ಥಿತಿಯನ್ನು ಅರಿಯದ್ದು, ಎಂದೇ ಇದು ಜಗತ್ತು. ಒಂದು ಸ್ಥಿತಿಯನ್ನು ಕಲ್ಪಿಸುವುದು ಅಜ್ಞಾನ ಆಜನ್ಮವೂ ಗತಿಯಲ್ಲಿಯೇ ಇರಲು ಎಂದರೆ ಒಂದೇ ಸವನೆ ಪಯಣ ಬೆಳೆಸಲು - ದುಡಿಯುತ್ತಿರಲು ಬೇಸರುವ ಮಾನವನ ಮೈಗಳ್ಳತನವು, ಸ್ಥಿತಿಯನ್ನು ಕಲ್ಪಿಸಿಕೊಳ್ಳಲು ಹಂಬಲಿಸುತ್ತದೆ. ದುಡಿಮೆ ಒಲ್ಲದ ಮಾನವರ ಜೀವಗಳ್ಳತನದ ಲಕ್ಷಣವಿದು. ಇವರು ಭೂತದಲ್ಲಿ ಅಥವಾ ಭವಿಷತ್ತಿನಲ್ಲಿ—ಹೆಚ್ಚಾಗಿ ಭೂತದಲ್ಲಿಯೇ ಪರಿಪೂರ್ಣತೆಯ ಒಂದು ಸ್ಥಿತಿಯು ಭೂಲೋಕದಲ್ಲಿ ಒಮ್ಮೆ ಇದ್ದಿತೆಂದು ನೆರೆನೆಮ್ಮುತ್ತಾರೆ. ಗ್ರಂಥಗಳಿಗೂ ಕಾಲಸ್ಥಿತಿಗೂ ವ್ಯಕ್ತಿ(ಗಳಿ)ಗೂ ಪರಿಪೂರ್ಣತೆಯನ್ನು ಆರೋಪಿಸುತ್ತಾರೆ ! ಆದರೆ ಇದು ಅವಾಸ್ತವ.

ಬದುಕಿರುವ ವರೆಗೂ ನಡೆಯುವುದೂ ನಡೆಯುವುದೇ. ನಡೆಯು ನಿಂತೊಡನೆ ಸಾವು. ಭೂಲೋಕದಲ್ಲಿ ಪರಿಪೂರ್ಣತೆ—ಸ್ಥಿತಿ ಎಂಬುದೇ ಇಲ್ಲ. ಪೂರ್ಣತೆಯ ವಿಚಾರವು ಕೇವಲ ಆದರ್ಶ (ಸತ್ಯ). ಪ್ರಗತಿಯ ಒಂದು ಘಟ್ಟವು ಮುಗಿದೊಡನೆ ಹೊಸ ಘಟ್ಟವು ಕ್ಷಿತಿಜದ ಮೇಲೆ ಕಣ್ಣೆದುರಿಗೆ ಬಂದೇ ಬಿಡುತ್ತದೆ ಇಂತು ಪರಿಪೂರ್ಣತೆಯು ಯಾವಾಗಲೂ ಕ್ಷಿತಿಜದಲ್ಲಿ— ಕಣ್ಣೆದುರಿಗೇ. ಅಂತಲೇ ಅದು ಆದರ್ಶ.* ಇಲ್ಲಿ ಅನಂತತ್ವದ

* ಅಗ್ನಿ ವಿದ್ಯೆ ಪು ೬೫—೪೬; ಸೌಂದರ್ಯ ವಿಚಾರವು, ಪು ೧೪ ನೋಡಿ.

ಅನುಭವವು ಬರುವುದು. ಅನಂತತ್ವವನ್ನು ಒಪ್ಪಿಕೊಳ್ಳದೆ ಪ್ರಗತಿಯು ಅರ್ಥವಿಹೀನ. ಈ 'ಜಗತ್ತಿ'ನಲ್ಲಿ (ಅದು ಗತಿಯುಕ್ತವಾಗಿರುವುದರಿಂದ ಯಾವುದಕ್ಕೂ ಪರಿಪೂರ್ಣತೆಯಿಲ್ಲ; ಎಲ್ಲವೂ ಸಾಪೇಕ್ಷ. ಜಗದ್ರಚನೆಯು ಇದಕ್ಕನುಸರಿಸಿಯೇ ಇದೆ. ಈ ಮರ್ಮವನ್ನರಿಯದವರು ಲೋಕವು ಅಪೂರ್ಣವೂ ಕೊರತೆಯುಳ್ಳದೂ ಎಂದು ಗೊಣಗುತ್ತಾರೆ. ಹೀಗಿದೆ ಎಂದೇ ಅದು ನಡೆದಿದೆ—'ಜಗತ್' ಎನಿಸಿದೆ ಪೂರ್ಣತೆಯು ಕೈಗೂಡು ವಂತಿದ್ದರೆ ಆ ಕ್ಷಣಕ್ಕೇ ಅದರ ಕೊನೆಯು ನಿಶ್ಚಿತ.

ಕೊನೆ-ಗೊನೆಗಳು ಒಂದೇ, ಎಂಬ ಕಂನಾಡವರ ಅನುಭೂತಿಯು ಸಾಕ್ಷಿ, ಅವರ ಈ ಪದಪ್ರಯೋಗ. ಹಣ್ಣು ಪೂರ್ಣವಾಗಿ ಕಳಿತಿದೆಯೆಂದರೆ ಕೊಳೆಯುವುದಕ್ಕೆ ಆರಂಭವಾಗಿದೆ, ಎಂದೇ ಅರ್ಥವಲ್ಲವೆ ? ಯಾವುದೇ ಬಗೆಯ 'ಪೂರ್ಣತೆ' ಎಂದೊಡನೆ ನಮ್ಮ ಜನ ಹೆದರುತ್ತಿದ್ದಂತೆ ಕೆಲವೊಂದು ಸಂಪ್ರದಾಯಗಳಿಂದ ತಿಳಿದುಬರುತ್ತದೆ. ಅತ್ಯಂತ ರಮಣೀಯ ಮೂರ್ತಿ ಯನ್ನು ಅಥವಾ ಅಂದವಾದ ಕೆತ್ತನೆಯ ಬೆಡಗಿನ ಕೆಲಸವನ್ನು ಮಾಡಿದ ಶಿಲ್ಪಿಯು ಜನದ 'ದೃಷ್ಟಿಯನ್ನು ತೆಗೆ'ಯುವುದಕ್ಕಾಗಿ ಅದರಲ್ಲಿ ಎಲ್ಲಿ ಯಾದರೂ ಒಂದು ಕುಂದುಕವನ್ನು ಇರಿಸುತ್ತಿದ್ದನು. ಈ ಕುಂದುಕ ಅಥವಾ 'ದೃಷ್ಟಿ'ಯು ಆ ಕೆಲಸವು ಇನ್ನೂ ಅಪೂರ್ಣವಿದೆಯೆಂದು ಒಪ್ಪಿಗೆಯೆ ಸರಿ. ಯೌವ್ವನಸ್ಥರಾದ ಮದುಮಕ್ಕಳ ವೈಸಿರಿಗೆ ದೃಷ್ಟಿತಾಗಬಾರದೆಂದು ಅವರ ಗಲ್ಲಕ್ಕೆ ಕಪ್ಪುಬಟ್ಟು ಇಡುವ ರೂಢಿಯಿದೆ. ಒಂದು ಮನೆತನದ ಮಹಾವಿಭವಕ್ಕೆ ಕಾರಣರಾದ ವಿಭೂತಿಗಳು ಆ ಮನೆತನದ ಕೊನೆಯು ಸೂಚಕವೆಂದು ಒಂದು ಗ್ರಹಿಕೆಯಿದೆ.

ಪೂರ್ಣತೆಯ ಆದರ್ಶದಲ್ಲಿ ಶ್ರದ್ಧೆಯಿಂದ ದೃಷ್ಟಿಯನ್ನು ಸ್ಥಿರಗೊಳಿಸಿ. ತನ್ನ ಅನುದಿನದ ನಡೆವಳಿಯಲ್ಲಿ ಅಪೂರ್ಣತೆಯ ಅರಿವೆಯು ಇರುವಲ್ಲಿಯೇ ಮಾನವರ ಕ್ಷೇಮವಿದೆ. ಅಪೂರ್ಣತೆಯ ಮೂಲಕವಾಗಿಯೆ ಈ ಲೋಕ ದಲ್ಲಿ ಎಲ್ಲ ವಸ್ತುಗಳೂ ಒಂದಕ್ಕೊಂದು ಪೂರಕವಾಗಿ ಪೋಷಕವಾಗಿ ಇರ ಬಲ್ಲುವಾಗಿವೆ. ಒಬ್ಬರಿಗೆ ಇನ್ನೊಬ್ಬರ ಅವಶ್ಯಕತೆಯಿದೆ. ಇದರಿಂದಲೆ ಜನ ಬದುಕಿಕೊಂಡಿದೆ. ಸಾಮಾಜಿಕ ಭಾವನೆ ಜನಹೃದಯದ ?

ಸ್ಥಿರವಾಗಿ ಉಳಿದಿದೆ. ಸಮಾಜವು ದೃಢವಾಗಿ ಶಾಶ್ವತವೆನಿಸಿದೆ. ಏನೊಂದು ಕಾರಣದಿಂದ ತಾನು 'ಪೂರ್ಣ'ನೆಂಬ ಭ್ರಾಂತಿಯು ಸ್ವಲ್ಪ ತಲೆಯೆತ್ತಿದರೂ ಸಾಕು. ಆ ವ್ಯಕ್ತಿಯ ತಲೆ ತಿರುಗುವುದು; ಅನರ್ಥಗಳಿಗೆ ಆರಂಭವಾಗುವುದು. 'ಅಹಂ ಬ್ರಹ್ಮಾಸ್ಮಿ' ಎಂಬ ಕೊಬ್ಬು ಆಸುರೀವೃತ್ತಿಗೆ ಒಯ್ಯುವುದೆಂದು ಹೇಳುವುದು ಈ ಅರ್ಥದಲ್ಲಿ ತೀರ ಸರಿ. ಧನ-ಮಾನ, ಪಟ್ಟ-ಪದವಿಗಳ ಗಾಳಿ ಸೋಂಕುತ್ತಲೆ ಕಣ್ಣು ನೆತ್ತಿಗೇರಿ, ಸಂಗಡಿಗರಾಗಿದ್ದ ಸ್ನೇಹಿತರೂ ಕಾಣದಾಗುವರು. ಇಂತಹರು ರಾಜ, ಒಡೆಯ, ಗುರು ಮಹಾರಾಜ, ಸರ್ವಾಧಿಕಾರಿ ಎಂಬಿವೇ ಮೊದಲಾದ ಒಂದಿಲ್ಲೊಂದು ಬಗೆಯ ಕೇಂದ್ರಸ್ಥಾನವನ್ನು ಸಂಪಾದಿಸಿ, ಬಳಿಕ ಲೋಕಕಂಟಕರಾದುದನ್ನು ಇತಿಹಾಸವು ಹೇಳುತ್ತದೆ. ಈ ಲೋಕಾನುಭವವಿದ್ದವರು ಜಗತ್ತು ಅಪೂರ್ಣವಿದ್ದುದೇ ಲೇಸಾಗಿದೆಯೆಂದು ಒಪ್ಪಿಕೊಳ್ಳದೆ ಇರಲಾರರು. ಜಗತ್ತಿನ ಅಪೂರ್ಣತೆಯಿಂದ (ದೇವರು ಇದ್ದಾನೆಂದು ಗ್ರಹಿಸಿದರೂ) ಅದರ ನಿರ್ಮಾತೃವು ಅನನುಭವಿಯಾದ ಅಪೂರ್ಣನೇ ಆಗಿರಬೇಕೆಂದು ಪರಿಹಾಸ ಮಾಡುವ ಬುದ್ಧಿವಂತರಿದ್ದಾರೆ. ಆದರೆ ಪೂರ್ಣತೆಯ ಅನರ್ಥಪರಂಪರೆಗಳ ತೊಡಕು ಇವರ ಸೂಕ್ಷ್ಮಬುದ್ಧಿಗೆ ಇನ್ನೂ ನಿಲುಕಿದಂತೆ ತೋರುವುದಿಲ್ಲ.

ಅನಂತ-ಗುಣ-ಪೂರ್ಣವಾದ ಆದರ್ಶದ ನೆನಹಿನಲ್ಲಿ ಮಾನವ ಸಮಾಜವು ವಿಕಾಸದತ್ತ ಸಾಗಬೇಕೆಂಬುದು ಗುರಿ. ತಿಳಿದೂ ತಿಳಿಯದೆಯೂ ಈ ದಾರಿಯತ್ತ ಮಾನವರು ಹೊರಟಿರುವುದೂ ನಿಜ. ಆದರೆ ಈ ಬಗೆಯ ವಿಕಾಸಕ್ಕಾಗಿ ಉಪಯೋಗಿಸುವ ಸಾಧನಗಳ ಶುದ್ಧಿಯ ಅವಶ್ಯಕತೆಯನ್ನು ಮಾತ್ರ ಗಾಂಧಿಜೀಯವರಷ್ಟು ಒತ್ತಿ ಹೇಳಿದವರು ಬೇರಿನ್ನಾರಿಲ್ಲ. End justifies the means ಗೆಲ್ಲುವುದಕ್ಕೆ ಉಪಯುಕ್ತವಾದ ಸಾಧನಗಳೆಲ್ಲ ಪವಿತ್ರವೇ, ಎಂದು ಬಗೆದು, ಲೋಕಕಲ್ಯಾಣಕ್ಕೆ ಹೊರಟ ಮಹನೀಯರಿಗೆ ಹಲವು ಕಾಲ ತಮ್ಮ ಮೂಲಭೂತ ತಪ್ಪು ತಿಳಿಯಲೇ ಇಲ್ಲ. ಮಾನವನು ಕೇವಲ ಸ್ವಾರ್ಥಿ. ಸಾರ್ಥಸಾಧನೆಗೆ ಅಡ್ಡಿಯಾಗಬಾರದೆಂದು ಪರೋಪಕಾರಾದಿ ವಿಚಾರಗಳು ತಲೆಯೆತ್ತಿವೆ. Enlightened self-interest ತನಗೆ ಕೇಡು ಆಗಬಾರದೆಂದು ಸ್ವಾರ್ಥಭಾವಕ್ಕೆ ಉದಾತ್ತರೂಪವನ್ನು ಕೊಡುವ

ಆವಶ್ಯಕತೆಯನ್ನು ಪ್ರತಿಪಾದಿಸುವುದುಂಟು ಈ ತತ್ವವೂ ಕೇಡಿಗೆ ಸಂಚ ಕಾರ. ಏಕೆಂದರೆ ಸ್ವಾರ್ಥವೇ ಮೂಲಸ್ವಭಾವವೆಂದ ಬಳಿಕ, ಅದು ಸ್ವಾಭಾವಿಕವಾಯ್ತು. ಪರೋಪಕಾರವೇ ಅಪವಾದ; ಅಸ್ವಾಭಾವಿಕ ಕಾರ್ಯವೆಂದ ಹಾಗಾಗುವುದು Greatest good of the greatest number ಎಂಬ ತತ್ವವು ಜೀವನ ಗುರಿಯಾಗಿರಬೇಕೆಂದು ಮಿಲ್ ಮೊದ ಲಾದವರು ಪ್ರತಿಪಾದಿಸಿದರು. ಸರಿ; ಆದರೆ ಇದನ್ನು ಪರಮಾರ್ಥದಲ್ಲಿ ಒಪ್ಪಿಕೊಂಡರೂ End justifies the means ಎಂಬ ವಿಚಾರವು ತಪ್ಪು ಎಂದು ಒಪ್ಪಿಕೊಳ್ಳುವವರೆಗೆ ಮಾನವ ಸಮಾಜಕ್ಕೆ ಗಂಡಾಂತರವು ಎಂದೂ ತಪ್ಪಿಲ್ಲ. ಯುದ್ಧದಿಂದ ಲೋಕಕಲ್ಯಾಣ ಮಾಡಹೊರಟ ಅಶ್ವಮೇಧಾದಿ ಭಾರತೀಯ ರಣಸಂಗ್ರಾಮಗಳಿಂದ ಆದ ಅನಾಹುತವಂತೂ ಹಳೆಯ ಕಥೆ ಯಾಯ್ತು. ಇತ್ತೀಚಿನ ಯುರೋಪಿಯ ಯುದ್ಧಗಳಿಂದಲೂ ಈ ಮಾತಿನ ಮನವರಿಕೆಯಾಗುವಂತಿದೆ.

ಬಡವರ ದುಃಖಗಳಿಂದ ತಲ್ಲಳಗೊಂಡು ಕಳವಳಿಸಿ ಮಾರ್ಕ್ಸನು ಸಮತಾವಾದವನ್ನು ಪ್ರತಿಪಾದಿಸಿದನು. ಆದರೆ ವರ್ಗಕಲಹದ ಉಪ ದೇಶವು ಅವನ ಉದಾತ್ತ ತತ್ವದ ವಿಕಾಸಕ್ಕೂ ಪ್ರಚಾರಕ್ಕೂ ವಿಪರೀತ ಆತಂಕಗಳನ್ನು ಉಂಟುಮಾಡಿದೆ. ಮಾರ್ಕ್ಸನು ಸಾಧನಶುದ್ಧಿಗೆ ಏನೂ ಬೆಲೆಯನ್ನೇ ಕೊಟ್ಟಿಲ್ಲ. ಬಡವರ ಕಲ್ಯಾಣದ ಹೆಸರಿನಲ್ಲಿ ಯಾವ ಅನ್ಯಾಯವೂ ನ್ಯಾಯವೇ ! ಎಂತಹ ಕ್ರೂರಕೃತ್ಯವೂ ಪವಿತ್ರವೇ ! ಮಾನವ ಕುಟುಂಬದ ಅನಿವಾರ್ಯದ ವಿಭಾಗವೆಂದು ರಾಷ್ಟ್ರವನ್ನೂ ತನ್ಮೂಲಕ ಮಾನವಹಿತ-ಪ್ರವೃತ್ತಿಕ ರಾಷ್ಟ್ರೀಯತ್ವವನ್ನೂ ಒಪ್ಪುವ ಗಾಂಧಿಜೀಯಂತಹರಿಗೂ 'ರಾಷ್ಟ್ರೀಯ ವೃತ್ತಿ'ಯುವರೆಂದು ಆರೋಪಿಸುವ ಸಮತಾವಾದೀ ರಾಯರುಂಟು ! ಪ್ರಾದೇಶಿಕ ಅಭಿಮಾನ, ರಾಷ್ಟ್ರೀಯತ್ವ ಎಂದೊಡನೆ ತಲೆಶೂಲೆ; ಆದರೆ ವರ್ಗಕಲಹವು ಒಪ್ಪಿಗೆ ! ಸಾಧನಶುದ್ಧಿಗೆ ಮಹತ್ವವಿಲ್ಲ. ಬಡವರ ಉದ್ಧಾರದ ಹೆಸರಿನಲ್ಲಿ ಶ್ರೀಮಂತರೆಂಬವರ ದ್ವೇಷವು ದ್ವೇಷವಲ್ಲವೊ ? ಕೂಲಿಕಾರರ ಹಿತದ ಕೃತಿಗಳ ನಿಮಿತ್ತದಿಂದ ಆ ಜನ ದೊಳಗೆ ದ್ವೇಷ ಅಸೂಯಾದಿ ಭಾವನೆಗಳಿಗೆ ಧೂಪಹಾಕಿ, ಅವರ ಮೈ ಮರೆಯಿಸಿ ಕಿಚ್ಚಿಯಹಚ್ಚುವುದು ಯಾವ ನೀತಿ ? ದೊಡ್ಡ ದೊಡ್ಡ

ಕಾರಖಾನೆಗಳಿಂದ ಲಕ್ಷಾವಧಿ ಕೂಲಿಕಾರರು ವೈಯ್ಯಕ್ತಿಕ ಸ್ವಾತಂತ್ರ್ಯಕ್ಕೆ ಎರವಾಗುವ ಹೊತ್ತು ಬಂದಿದೆ. ಆದಕಾರಣ ವಿಕೇಂದ್ರೀಕರಣದ ಉಪಾಯವನ್ನು ಗಾಂಧೀಜಿ ಹೇಳಿದರು. ವೈಯ್ಯಕ್ತಿಕ ಸ್ವಾತಂತ್ರ್ಯಕ್ಕೆ ಬೆಲೆಯಿಲ್ಲದ ಸಮತಾವಾದವು ಲೋಕವಿಕಾಸಕ್ಕೆ ಸಹಕಾರಿಯಾಗಲಾರದು.

ಸಮತಾವಾದವಾಗಲಿ ಅಥವಾ ಅಂಥ ಬೇರೆ ಯಾವುದೇ ತತ್ವವಾಗಲಿ ಯಾರ ಸಲುವಾಗಿ? ಸಮಾಜವೆಂದರೇನು? ಅದು ವ್ಯಕ್ತಿಗಳ ಹೊರತಾಗಿ ಯುಂಟೇ? ಲೋಕ ಅಥವಾ ಸಮಾಜ ಇಲ್ಲವೆ ರಾಷ್ಟ್ರವು ತಾತ್ವಿಕ; ವ್ಯಕ್ತಿಯೇ ವಾಸ್ತವ. ವ್ಯಕ್ತಿಯನ್ನೇ, ಮರೆತ ಅಥವಾ ಕಡೆಗಣಿಸಿದ ಯಾವ ಉದಾತ್ತ ತತ್ವವೂ ಹೆಚ್ಚು ದಿನ ವ್ಯವಹಾರ್ಯವೆನಿಸಿ ಬಾಳದು. ಆದರ್ಶ ಸಮಾಜ ರಚನೆಯ ಮಬ್ಬಿನಲ್ಲಿ ವ್ಯಕ್ತಿಯ ವೈಶಿಷ್ಟ್ಯಗಳನ್ನೇ ಲೆಕ್ಕಿಸದೆ, ವ್ಯಕ್ತಿಗಳನ್ನು ಕೇವಲ ಯಂತ್ರಸ್ವರೂಪಕ್ಕೆ ಇಳಿಸುತ್ತಿರುವ ಎಲ್ಲ ವಾದಗಳೂ ವಿವಾದಾಸ್ಪದಗಳೇ. ಆದುದರಿಂದಲೇ ವಾದ-ಇಝಂ ಎಂಬುದು ಹುಚ್ಚು ರೋಗ. ಇದರಿಂದ ತಲೆಕೆಡಿಸಿಕೊಂಡವರಿಗೆ ತಾರತಮ್ಯವು ಉಳಿಯುವು ದಿಲ್ಲ. ಅತಿವಾದಿಗಳಾಗಿ ತಮ್ಮ ತಮ್ಮ ಸಂಘಟನೆಯ ಆವೇಶದಲ್ಲಿ ವ್ಯಕ್ತಿಗಳ ವ್ಯಕ್ತಿತ್ವವನ್ನು ನಾಶಮಾಡುತ್ತಿದ್ದಾರೆ.

ವ್ಯಕ್ತಿಯು ಅಗಾಧ, ಅದ್ಭುತಶಕ್ತಿಯ ಆಗರವಾಗಿದೆ. 'ಅತಿಪರಿಚಯಾತ್ ಅವಜ್ಞಾ'! ವ್ಯಕ್ತಿವ್ಯಕ್ತಿಗಳಲ್ಲಿ ಹುದುಗಿರುವ ಆ ದಿವ್ಯ ಚೈತನ್ಯ ಶಕ್ತಿಯು ಎಂತಹ ಅಪೂರ್ವ ವಸ್ತು! ಲೋಕ, ರಾಷ್ಟ್ರ ಅಥವಾ ಸಮಾಜವೆಂಬ ಹೆಸರಿನಲ್ಲಿ ಸಲ್ಲಿಸುವ ಪೂಜೆ ಯಾರಿಗೆ? ಅದು ಮಾನವ ಹೃದಯ ಗುಹಾನಿಹಿತ ಈ ಚೈತನ್ಯದ ಆರಾಧನೆಯು ತಾನೆ? ಈ ಜೀವನ ದೇವತೆಯನ್ನೇ ಮರೆತು, ವರ್ಗಕಲಹ-ಜಾತಿದ್ವೇಷ-ಜನಾಂಗಗಳಲ್ಲಿ ಮತ್ಸರ-ರಾಷ್ಟ್ರಗಳಲ್ಲಿ ಆಕ್ರಮಕ ಭಾವನೆಯ ವಿಷಬೀಜಗಳನ್ನು ಬಿತ್ತುವ 'ವಾದ'ಗಳು ಸಮಾಜ ವಿಕಾಸಕ್ಕೆ ಪೋಷಕವಾಗಲಾರವು. ಚೇತನಶಕ್ತಿ ಅಥವಾ ಚಿತ್ ಶಕ್ತಿಗೆ ಸ್ವತಂತ್ರವಾದ ಅಸ್ತಿತ್ವವನ್ನು ಒಪ್ಪಿಕೊಳ್ಳದೆ ನಡೆವ ವಿಶ್ವಶಾಂತಿಯ ಎಲ್ಲ ಪ್ರಯತ್ನಗಳೂ ಬೂದಿಯಲ್ಲಿಯ ಹೋಮ. ಶ್ರೀ ಮಾನವೇಂದ್ರ ರಾಯರು ಅನುಭವದಿಂದ ಮುಪ್ಪಾಗಿ, ಇತ್ತೀಚೆಗೆ ವ್ಯಕ್ತಿಗೆ ಪ್ರಾಶಸ್ತ್ಯವನ್ನು

ಕೊಡುವ 'ನವಮಾನವತಾವಾದ'ದ ಯೋಗಿಗಳಾಗಿರುವುದು ಕೇಳ ಬರುಬರುತ್ತದೆ ಆದರೆ, ಮಾನವನೊಳಗಿನ ಅನಂತಶಕ್ತಿಯ ದಿವ್ಯಾಂಶವನ್ನು ನಿಃಸಂದಿಗ್ಧ ರೀತಿಯಲ್ಲಿ ಒಪ್ಪಿಕೊಳ್ಳದ ಭೌತವಾದದ ಬಲೆಯೊಳಗಿಂದ ಅವರ ಬುದ್ಧಿಯು ಇನ್ನೂ ಮುಕ್ತವಾಗಿಲ್ಲ.

'ಮಾನವ' ಎಂಬ ಪ್ರಬಂಧದಲ್ಲಿ ಗಾರ್ಕಿಯು ಜನಸಾಮಾನ್ಯರಿಗೂ ಸಾಹಿತಿಗಳಿಗೂ ಒಂದು ಪ್ರಾರ್ಥನೆಯನ್ನು ಮಾಡಿದ್ದಾನೆ. ಮಾನವನನ್ನು 'ಶೂನ್ಯ'ನೆಂದು ಬಗೆಯಬೇಡಿ; ಮಾನವನನ್ನು ನೋಡಿ ಆಶ್ಚರ್ಯಯುಕ್ತರಾಗಲು ಕಲಿಯಿರಿ; ಎಂದು ಆತನ ವಿಜ್ಞಾಪನೆ. ಮಾನವರಲ್ಲಿ ಅಡಕವಾಗಿರುವ ಅದ್ಭುತ ಶಕ್ತಿಯನ್ನು ಮರೆತು ಲೋಕವು ಹಾನಿಗೀಡಾಗುತ್ತಲಿದೆಯೆಂದು ಆತನು ಮಿಡುಕಿದ್ದಾನೆ. ಮಾನವನೊಳಗಿನ ಕೀಳ್ಮೆಯನ್ನೇ ನೆನೆದು, ಅಂತಹ ಚಿತ್ರಗಳನ್ನೇ ಬರೆದು, ತಮ್ಮ ಅಂತರಂಗವನ್ನೂ ಲೋಕದ ಅಂತಃಕರಣವನ್ನೂ ಅಪವಿತ್ರಗೊಳಿಸಿ, ಕಲುಷಿತಮಾಡುವ ಜನರನ್ನೂ ಸಾಹಿತಿಗಳನ್ನೂ ಗಾರ್ಕಿಯು ಮಹಾರೋಗಿಗಳೆಂದು ಕರೆದಿದ್ದಾನೆ. ಪತಿತರೆನಿಸುವವರಲ್ಲಿಯೂ ಅಡಗಿರುವ ಮಹಿಮೆಯನ್ನು ಬಹಿರಂಗಪಡಿಸಿ, ಲೋಕಕ್ಕೆ ಬೆಳಕಿನ ದಾರಿಯನ್ನು ತೋರಲು ಗಾರ್ಕಿಯು ಬಿನ್ನವಿಸಿದ್ದಾನೆ. ಆದರೆ ಗಾರ್ಕಿಯ ಈ ವಿಚಾರಗಳು ರಶಿಯನ್ ಕಮ್ಯುನಿಸ್ಟ ತತ್ವಜ್ಞಾನದ ಅಥವಾ ಬೇರೆ ಯಾವುದೇ ಏಕಾಂಗಿ ವಾದಗಳ ಚೌಕಟ್ಟಿನಲ್ಲಿ ಸರಿಹೋಗುವುದು ದುಸ್ತರ. ಏಕೆಂದರೆ ಗಾರ್ಕಿಯ ಈ ವಿಚಾರಗಳು ಜನರನ್ನು ಭೌತವಾದದಿಂದ ದೂರ ಒಯ್ಯುತ್ತವೆ. ಮಾನವನೊಳಗಿನ ಚಿತ್‌ಶಕ್ತಿಯನ್ನು ಆದರಿಸಲು, ಗೌರವಿಸಲು, ಪೂಜಿಸಲು ಒತ್ತಾಯಪಡಿಸುತ್ತವೆ. 'ಚಿತ್'ದ ಉಪಾಸನೆಯೆ ಜೀವನಸಾರಸರ್ವಸ್ವವೆಂದು ಒಪ್ಪಿಕೊಂಡಲ್ಲಿ ವ್ಯಕ್ತಿಯ ಜೀವನಕ್ಕೆ ಬೆಲೆ ಬರುವುದು. ಪಕ್ಷವನ್ನು ಬಲಿಷ್ಠಮಾಡುವುದಕ್ಕಾಗಿ ಜನರಲ್ಲಿ ಪಕ್ಷಾಭಿಮಾನ ಆವೇಶ ತುಂಬಿ, ಅವರಿಗೆ ಉಳಿದ ಪಕ್ಷದೊಳಗಿನ ಗುಣಾಂಶವೇ ತಿಳಿಯದಂತೆ, ಹೆರವರ ಬಗೆಗೆ ಬರಿಯ

ದುರ್ಭಾವನೆಗಳೇ ಉಂಟಾಗುವಂತೆ ಮಾಡುವುದು ಅನ್ಯಾಯ, ಅನೀತಿ ಎಂದು ಹೇಳಬೇಕಾಗುತ್ತದೆ.

ರಶಿಯದ ಕ್ರೊಪೊಟ್‌ಕಿನ್‌ನ (೧೯೦೦) ಸ್ವಯಂಶಾಸ್ವಿತ ವ್ಯಕ್ತಿ ಮಹಾತ್ಮ್ಯೆಯ ಅನಾಯಕತ್ವವಾದವು ಮಾನವನೊಳಗಿನ ದಿವ್ಯಶಕ್ತಿಗೆ ಪ್ರಾಶಸ್ತ್ಯವನ್ನು ಕೊಡುವುದೇ ಆಗಿದೆ. ಸಾಮಾಜಿಕ ಹೊಣೆಗಳನ್ನು ತುಚ್ಛ ಮಾಡದೆ ವ್ಯಕ್ತಿಯು ತನ್ನ ಜೀವನವನ್ನು ಈ ಬಗೆಯಲ್ಲಿ ಅರಳಿಸಿಕೊಳ್ಳ ಬಹುದಾದರೂ ಇಡೀ ಸಮಾಜವೇ ಅಥವಾ ಬಹುಸಂಖ್ಯಾಕರು ಈ ವೃತ್ತಿ ಯವರಾದಾರೆಂದೆಣಿಸುವುದು ಅಸ್ವಾಭಾವಿಕ. ಹಾಗೆ ಒತ್ತಾಯಪಡಿಸಿದರೆ ಕೃತ್ರಿಮತೆ ತಲೆಯೆತ್ತುತ್ತದೆ

ವಿಕಾಸವಾಗುತ್ತಿರುವುದು ನಿಜ. ಆದರೆ ಅದು ಆಗುವ ಕ್ರಮ ಯಾವುದು ? ತನ್ನತಾನೆ ಆಗುವುದೆಂಬುದು ಹುಸಿ. ಮನುಷ್ಯೇತರ ಪ್ರಾಣಿ ಗಳಲ್ಲಿ ವಿಕಾಸದ ಒಲವು ವಿನಾಶದ ಕಡೆಗೇ ಇದೆ. ಹುಲಿ-ಸಿಂಹಗಳ ಕುಲವು ಕಣ್ಮರೆಯಾಗುತ್ತಲಿದೆ. ಗುಡ್ಡದಂತಹ ಗಾತ್ರದ ಸರೀಸೃಪ ಮಹಾವಂಶಗಳ ತಳಿಯು ಹಲ್ಲಿಯಂತಾಗಿರುವುದು. ಮಾನವನೊ ? ವಿಕಾಸಗೊಳ್ಳುತ್ತಿರುವುದೇ ನಿಜವಿದ್ದರೆ ಅದು ಕೇವಲ ತನ್ನ ಧೀಶಕ್ತಿಯಿಂದ, ಚಿತ್‌ಶಕ್ತಿಯ ಬಲದಿಂದ ಮಾತ್ರವಲ್ಲದೆ ತನ್ನತಾನೆ ಸುಧಾರಣೆ ಹೊಂದುತ್ತ ಲಿದ್ದಾನೆಂಬುದು ನಿರಾಧಾರವಾದ ವಿಧಾನ. ಲಂಡನ್ ಸ್ಕೂಲ ಅಫ್ ಎಕೊನೊಮಿಕ್ಸದ ಡೈರೆಕ್ಟರರಾದ ಮಿ. ಕಾರ್ ಸಾಂಡರ್ಸರು ಹಾಲ್ಡೆನ್ನರ ಮಾತುಗಳನ್ನೇ ಎತ್ತಿ ಬರೆದ ವಿಚಾರವು ಮನನೀಯವಾಗಿದೆ :

The course of evolution has generally been downwards. The majority of species have degenerated or become extinct, or what is perhaps worse, have gradually lost many of their functions. The ancestors of oysters and barnaches had heads. Snakes have lost their limbs and penguins their power of flight. Man may just as easily lose his intelligence.... If, as appears to be the case at present in Europe and North America, the less intelligent of our species continue to breed more

rapidly than the able, we shall probably go the way of dodo and the kiwi....... It seems to me altogether probable, „ says T. B. S. Haldane in another place 'that man will take his course unless he takes conscious control of his evolution within the next few thousand years'. All that need be said by way of comment is that 'hundreds' would be more appropriate than 'thousands'.

—Evolution. Edited by R. G. DeBeer,
1938, P. 125

Conscious control of self ಅಗತ್ಯ. ತನ್ನತಾನೇ ವಿಕಾಸವಾಗುವದೆಂಬ ವಿಚಾರವು ನಿರಾಧಾರ. ಸಾಗಿದತ್ತ ಸಾಗಲಿ, ನಾವು ಹೀಗೆ ನಡೆಸವರೇ. ತಿದ್ದಿಕೊಳ್ಳುವವರಲ್ಲ; 'ಸೆಲ್ಫಕಂಟ್ರೋಲ್' ಎಂದು ಸಂಯಮ ನಿಯಮ ನಮಗೆ ಹೇಳಬೇಡಿ. ಭೋಗಕ್ಕಾಗಿ ಜೀವ ಜನ್ಮತಾಳಿದೆ; ಸಾಯುವುದರೊಳಗಾಗಿ ಶಕ್ಯವಿದ್ದಷ್ಟು ವಿಲಾಸ, ವಿಹಾರ ಮಾಡುವುದೇ ಗುರಿ. ಇನ್ನೊಬ್ಬರು ತಮಗೆ ಅಡ್ಡಿಮಾಡಬಾರದೆಂದು ಎಷ್ಟೋ ಅಷ್ಟು ಸಜ್ಜನಿಕೆ ಸಾಕು; ಎಂಬ ಹೀನ ಭೌತವಾದದಿಂದ ಮಾನವರ ಪ್ರಗತಿಯ ಆಸೆಯಿಲ್ಲ. ಮೂಲಭೂತ ಸತ್‌ಪ್ರವೃತ್ತಿ ಆದರೆ ಜೀವಧಾರಣೆಗೆ, ಶರೀರ ಧರ್ಮಕ್ಕಾಗಿ ಸಂಕುಚಿತ ಸ್ವಾರ್ಥವು ತಲೆಯೆತ್ತುತ್ತದೆ. ಹಲವು ಜೀವಗಳೊಡನೆ ತನ್ಮಯತೆಯಲ್ಲಿಯೇ ಅದಕ್ಕೆ ಮಹಾನಂದ, ನಿಜಾನಂದ, ಎಂಬ ದೃಷ್ಟಿಯು ದೃಢವಾದಲ್ಲದೆ Conscious control of self ಯಾತಕ್ಕೆ? ಈ ಪದಸಮುಚ್ಚಯಕ್ಕೆ ವಿಶೇಷ ಅರ್ಥವೆ ಉಳಿಯುವದಿಲ್ಲ. ಸ್ವಾರ್ಥಸಾಧನೆಗಾಗಿಯೆ Conscious control of self ಇದ್ದರೆ, ಅದು ಹುಲಿ-ಹಾವುಗಳಿಗಿಂತಲೂ ಭೀಕರ ಪ್ರಾಣಿ. ಮನುಷ್ಯರೂಪಿ ಕ್ರೂರಮೃಗ ಸಂಯಮ, ದೂರದೃಷ್ಟಿ, ಸವಿಮಾತಿನ ಸಾಧನಗಳಿಂದ ಸಮಾಜದಲ್ಲಿ ತಮ್ಮ ಸ್ವಾರ್ಥದ ಚೆಲ್ಲಾಟ ನಡೆಸಿದ ನರಪಶುಗಳನ್ನು ಜೀವನದ ಎಲ್ಲ ರಂಗಗಳಲ್ಲಿಯೂ ನೋಡುತ್ತೇವೆ. ಧರ್ಮ, ರಾಜಕಾರಣ, ಸಾಹಿತ್ಯ ಮೊದಲಾದೆಡೆಗಳಲ್ಲಿ ಇಂತಹರಿಂದ ಪವಿತ್ರವಾದ ಜೀವನಗಂಗೆಯ ನೀರು ರಾಡಿ-ಬಗ್ಗಡವಾಗಿದೆ. ಆದಕಾರಣ Conscious control of selfದ ಹಿಂದಿನ ಮನೋಭೂಮಿಕೆಯು

ಮೂಲದಲ್ಲಿ ಸತ್ ಪ್ರವೃತ್ತಿಯಾಗಿರಲೇಬೇಕಲ್ಲವೆ ? ಇಲ್ಲವಾದರೆ ಲೋಕ ವಿನಾಶಕ್ಕೆ – ವಿನಾಶದ ಕಡೆಗಿನ ವಿಕಾಸಕ್ಕೆ ಕಾರ್‌ಸಾಂಡರ್ಸ‌ರು ಹೇಳು ವಂತೆ ಸಾವಿರ ವರ್ಷಗಳ ಅವಶ್ಯಕತೆಯೂ ಬೇಡ. ನೂರು ವರ್ಷ ಸಾಕು; ಇತ್ತ ಅಣುಬಾಂಬು, ಕರಾಳ ಕೆನ್ನಾಲಗೆಗಳನ್ನು ಚಾಚಿ, ನೂರು ವರುಷ ಗಳಾದರೂ ಏತಕ್ಕೆ, ತಾನು ಕ್ಷಣಾರ್ಧದಲ್ಲಿ ಲೋಕವನ್ನು 'ಪೂರ್ಣ' ಮಾಡಿ ಬಿಡುವೆನೆಂದು ಕೊಕ್ಕರಿಸಿ ನಕ್ಕು ನುಡಿಯುತ್ತಲಿದೆ !

ತಂಡಗಳ ಕಾಲವು ಆಯ್ತು; ಮತಗಳ ಯುಗವು ಮುಗಿಯಿತು; ರಾಜ-ಸಮ್ರಾಜರ ಅವತಾರವು ತೀರಿತು; ಬಂಡವಾಳಗಾರಿಕೆಯು ಅವಸಾನ ಕಾಲವು ಬಂತು. ರಾಷ್ಟ್ರ-ರಾಷ್ಟ್ರಗಳ ನಡುವಿನ ಅಭೇದ್ಯ ಮೇರೆಗಳು ನೆಲ ಸಮವಾಗಿ, ಮಾನವ ಕುಟುಂಬವು ಒಂದುಗೂಡುವುದರ ಕಡೆಗೆ ವಿಕಾಸವು ನಡೆದಿರುವಲ್ಲಿ ಸಂದೇಹವಿಲ್ಲ. ಯಾವ ದೇಶವೂ ಇಂದು ತನ್ನಷ್ಟಕ್ಕೆ ತಾನು ಉಳಿಯುವೆನೆಂಬ ವಿಚಾರವು ಅವಿಚಾರವೆನಿಸದೆ ಇರಲಾರದು. 'ನಾವು ವೈಭವ ಶಿಖರದಲ್ಲಿದ್ದೇವೆ; ನಮಗೆ ಕಂಗಾಲ ಯುರೋಪಿಯ ರಾಷ್ಟ್ರಗಳ ಕೋಲಾಹಲದ ಗೌಜಿ ಏತಕ್ಕೆ' ಎಂದು ಅಮೇರಿಕೆಯು ಕೆಲವು ಬಾರಿ ದೂರ ಸರಿದು ನಿಲ್ಲಬಯಸಿತು. ಆದರೆ ಅದು ಅಸಾಧ್ಯವೆನಿಸಿ ಜಾಗತಿಕ ವ್ಯವಹಾರ ಗಳಲ್ಲಿ ತನ್ನ ಸ್ಥಾನ-ಮಾನಗಳನ್ನು ಕಾಯ್ದುಕೊಳ್ಳಲು ಹಲವು ಆಟಗಳನ್ನು ಅದು ಆಡುತ್ತಲಿದೆ. ಏರಿಕೆಯಲ್ಲಿದ್ದಾಗ ಹಿಂದಕ್ಕೆ ಜಾಗತಿಕ ಅಗ್ರಪೂಜೆ ಯನ್ನು ಪಡೆವ ಕಾಲದಲ್ಲಿ ಭಾರತವು ತನ್ನ ಗಡಿಗಳನ್ನು ಮುಚ್ಚಿಕೊಂಡಿತು. ಕೆಳಮಟ್ಟದಲ್ಲಿರುವ ಹೊರನಾಡುಗಳಿಗೆ ಹೋಗಿ ತನ್ನ ದೇಶಬಾಂಧವರು ಕೆಡಬಾರದೆಂದು ಅದರ ಉದ್ದೇಶವಿರಬಹುದು. ಸಮುದ್ರಯಾನವನ್ನು ಬಹಿಷ್ಕರಿಸಿತು ಸಿಂಧುದೇಶ ದಾಟಿದರೆ ಪ್ರಾಯಶ್ಚಿತ್ತವೆಂದು ಸಾರಿತು. ಆದರೆ ಹೊರಗಿನವರು ಒಳನುಗ್ಗುವುದು ತಪ್ಪಲಿಲ್ಲ. ಸಿಂಧೂ ದೇಶವೂ ಅಪವಿತ್ರವಾಯ್ತು. ತಾವು ಪವಿತ್ರರು; ಹೊರಜಗತ್ತಿನ ಸಂಪರ್ಕದಿಂದ ನಮ್ಮ ಮಡಿ ಹಾಳಾಗುತ್ತದೆ; ಎಂದು ತಮ್ಮಷ್ಟಕ್ಕೆ ತಾವು ಇರಬಯಸಿದ ಭಾರತೀಯರ ಪಾಡು ನಾಯಪಾಡಾದುದನ್ನು ಹಿಂದಿನ ಇತಿಹಾಸವು ಹೇಳುತ್ತದೆ. ಆದುದರಿಂದ ಇಂದು ಲೋಕದಲ್ಲಿ ಗೌರವದಿಂದ ಬದುಕಲಿಚ್ಛಿ ಸುವವರೆಲ್ಲ ಜಾಗತಿಕ ದೃಷ್ಟಿಯುವರಾಗಲೇಬೇಕು. ಅದಕ್ಕನುಗುಣವಾಗಿ

ತನ್ನ ಆಚಾರ-ವಿಚಾರಗಳನ್ನು ಮಾರ್ಪಡಿಸಿಕೊಳ್ಳಲೇಬೇಕು. ಇನ್ನು ಮೇಲೆ ಒಂದು ಜಗತ್ತು; ನಾವೆಲ್ಲ ಅಭಿನ್ನ ಮಾನವ ಜನಾಂಗವೆಂಬ ಭಾವವು ಎಲ್ಲರಲ್ಲಿ ದೃಢವಾಗಬೇಕು. ಸಾಮಾಜಿಕ ವಿಕಾಸವು ಈಗ ಈ ಮಟ್ಟದಲ್ಲಿ ಕೆಲಸಮಾಡುತ್ತಲಿದೆ.

ಕಳೆದ ಮೊದಲನೆಯ ಮಹಾಯುದ್ಧದ ನಂತರ ರಾಷ್ಟ್ರಸಂಘದ ವಿಚಾರವು ಮೂರ್ತಸ್ವರೂಪವನ್ನು ತಾಳಿತು. ಆದರೆ ಅದರಲ್ಲಿ ರಾಷ್ಟ್ರಗಳ ವೈಯಕ್ತಿಕ ಸ್ವಾರ್ಥವು ಹಿಮ್ಮೆಟ್ಟಿದ್ದಿಲ್ಲ. ತತ್ಪರಿಣಾಮದಿಂದ ಎರಡ ನೆಯ ಮಹಾಯುದ್ಧವಾಯ್ತು. ಇನ್ನೊಂದು ಸಂಯುಕ್ತ ರಾಷ್ಟ್ರಸಂಘವು ತಲೆಯೆತ್ತಿತು. ಆದರೆ ಇದರಿಂದಲೂ ವಿಶ್ವಶಾಂತಿಗೆ ಸಹಾಯವಾದೀತೆಂದು ತೋರುವುದಿಲ್ಲ. ಮಾಲಿನೊವಿಸ್ಕಿ ಮೊದಲಾದ ಸಮಾಜಶಾಸ್ತ್ರಜ್ಞರು ಜಾಗತಿಕ ಸರಕಾರದ ಸ್ಥಾಪನೆಯಾಗಬೇಕೆಂದು ಸೂಚಿಸಿದ್ದಾರೆ. ಲಾಸ್ಕಿ ಪ್ರಭೃತಿಗಳು ವಿಶ್ವಶಾಂತಿಯ ಯೋಜನೆಗಳನ್ನು ಹೇಳುತ್ತಲಿದ್ದಾರೆ. ಆದರೂ ಮೂರನೆಯ ಮಹಾಯುದ್ಧವನ್ನು ತಡೆಯುವುದು ಶಕ್ಯವಾಗುವಂತೆ ತೋರುವುದಿಲ್ಲ. ಇನ್ನು ಮುಂದಿನ ಒಂದೆರಡು ದಶಕಗಳಲ್ಲಿ ಆ ನಿಟ್ಟಿನಲ್ಲಿ. ಪ್ರಯೋಗಗಳು ನಡೆಯಲಿವೆ. ಯಾವುದೇ ಜ್ಞಾನವು ಪ್ರಯೋಗಗಳಿಂದ ಮೊದಲೆ ಮಾಡಿ ನೋಡಿ ಕಲಿಯುವುದರಿಂದ ಮಾತ್ರ ಬರುವುದು. ತ್ರಿಕಾಲ ಜ್ಞಾನ, ಅಂತರ್ಜ್ಞಾನ ಅಥವಾ ಅಪರೋಕ್ಷಜ್ಞಾನ ಎಂಬುವೆಲ್ಲ ಬಾಲಿಶ ಮಾತುಗಳು ಯಾರೂ ಪೂರ್ಣರಿಲ್ಲ. ಯಾರಿಗೂ ಜ್ಞಾನದ ಗುತ್ತಿಗೆ ದೊರೆತಿಲ್ಲ. ಜ್ಞಾನವು ಅನಂತ. ಕಾಲಕಾಲಕ್ಕೆ ಹೊಸ ಹೊಸ ಬೆಳಕನ್ನು ಕಾಣುತ್ತ ಮುಂದುವರಿಯುವುದೂ ಪ್ರಯೋಗ ನಡೆಸುವುದೂ ಮಾನವರ ಕರ್ತವ್ಯವು.

ಇಂದಿನದೊ ಜಾಗತಿಕ ಚಟುವಟಿಕೆಗಳ ಕಾಲ. ಜಾತೀಯತೆ ಅಥವಾ ರಾಷ್ಟ್ರೀಯತೆಯು ಗೌಣವಾಗುತ್ತಲಿವೆ. ರಾಷ್ಟ್ರರಾಷ್ಟ್ರಗಳಲ್ಲಿ ಬಲ್ಲರೆಲ್ಲರ ಸಹಾನುಭೂತಿ, ಸಹಕಾರಗಳ ಆವಶ್ಯಕತೆಯುಂಟಾಗಿದೆ. ಜಾಗತಿಕ ಸಂಘ ಸಂಸ್ಥೆಗಳು ಸ್ಥಾಪಿತವಾಗುತ್ತಲಿವೆ. ಇಂದಿನಷ್ಟು ದೊಡ್ಡ ಪ್ರಮಾಣ ದಲ್ಲಿ ಜಾಗತಿಕ ಅರಿವು ಸಮಾಜದಲ್ಲಿ ಹಿಂದೆ ಎಂದೂ ಇರಲಿಲ್ಲ. ಪ್ರಾಣಿ ಶಾಸ್ತ್ರಜ್ಞನಾದ ಹಾಲ್ಡೆನ್ನನು Conscious control of self ಎಂದು

ಹೇಳುವುದಾದರೆ, ಸಮಾಜಶಾಸ್ತ್ರಜ್ಞನಾದ ಜೇನ್ಸ ಬರ್ಗನು Conscious self directing ಎಂದು ಇನ್ನು ಮುಂದಿನ ದಾರಿಯನ್ನು ಸೂಚಿಸುವನು. ಕಂನಾಡ ವಚನಕಾರರು 'ತನ್ನ ಅರಿವೇ ಗುರು' ಎಂದು ವ್ಯಕ್ತಪಡಿಸಿರುವರು. ಇಲ್ಲಿ ಅರಿವು Consciousness ಯಾತರದು ? ತನ್ನ ಸ್ವಾರ್ಥದ್ದೇ ? ಅಲ್ಲ; ಈ ಅರಿವು ಮಾನವ ಕುಟುಂಬದ್ದು; ಲೋಕಕಲ್ಯಾಣದ್ದು; ಅರ್ಥಾತ್ ಸತ್ಯದ್ದು ಏಕೆಂದರೆ ಸತ್ಯದಿಂದ ಹೊರತಾದ ಕಲ್ಯಾಣವೇ ಆಗಲಾರದು. Greatest good of the greatest number ಎನ್ನುವುದನ್ನು ಭಾರತೀಯರು ಸ್ವಲ್ಪ ತಿದ್ದಿ ಹೇಳಿರುವ ರೀತಿ ಹೀಗಿದೆ. 'ಯದ್ಭೂತಹಿತಂ ಅತ್ಯಂತಂ ಏತತ್ ಸತ್ಯಂ ಮತಂ ಮಮ'. ಸತ್ಯವೇ ಕಲ್ಯಾಣವು ಹೇಗೋ, ಹಾಗೆ ಕಲ್ಯಾಣವೇ ಸತ್ಯ. ಆದರೆ ಗುರಿ ಅತ್ಯಂತ ಕಲ್ಯಾಣವಾಗಿರಬೇಕು ಪ್ರೇಯವಲ್ಲ; ಶ್ರೇಯ. ಶುಚಿಯಾದ ಸಾಧನಗಳಿಂದ ಎಂದರೆ ಸತ್ಮಾರ್ಗದಿಂದ ಸಾಧಿಸಿದ, ಹೆಚ್ಚುಕಾಲ ಹೆಚ್ಚು ಜನರಿಗೆ ಉಪಕಾರವಾಗಬಹುದಾದ ಸುಖವೇ ಕಲ್ಯಾಣ. ಅದೇ ಶ್ರೇಯಸ್ಸು

ತನ್ನರಿವನ್ನೇ ಗುರುವಾಗಿಟ್ಟುಕೊಂಡು ಅತ್ಯಂತ ಲೋಕಕಲ್ಯಾಣದ ದಾರಿಯಲ್ಲಿ ಎಂದರೆ ಸತ್ಮಾರ್ಗದಲ್ಲಿ ಬೆಳಕಿನಿಂದ ಬೆಳಕಿಗೆ ಸಾಗುತ್ತ ಮುನ್ನಡೆವಲ್ಲಿಯೇ ಮಾನವ ಸಮಾಜದ ವಿಕಾಸವಿದೆ.

**ಶುಭಾಃ ತೇ ಪಂಥಾನಃ**

---

೪

# ವ್ಯಕ್ತಿ ಮತ್ತು ಸಮಾಜ

ವ್ಯಕ್ತವಾಗಿ ಇರುವದರಿಂದ ಅದು ವ್ಯಕ್ತಿ. ವ್ಯಕ್ತವಾಗಿ ಎಂದರೆ ಸ್ಪಷ್ಟವಾಗಿ ಕಾಣುತ್ತಿರುವದೆಂದು ಇದರ ಭಾವ. ಉಳಿದವುಗಳಿಂದ ಬೇರೆಯಾಗಿ ಇಲ್ಲದ್ದು, ಕಾಣುವ ಗುಣವನ್ನು ಕಳೆದುಕೊಳ್ಳುತ್ತಿದೆ ತೋರವಾ (ಎಂದರೆ ದೋರ-ಘೋರ-ಡೋರ) ಇರುವಂತಹದು ಜನರ ಕಣ್ಣಿಗೆ ಸಹಜವಾಗಿ ತೋರಬಲ್ಲದು. ಅಲ್ಪವಾದುದು ಅಡಗಿಹೋಗುವುದು. ತೋರವಾಗಿ ಎದ್ದು ಕಾಣುವುದೇ ಕಣ್ಣು ಸೆಳೆಯುವುದು. ಆದುದರಿಂದ ತನ್ನದೇ ಆದ ಅಂದವನ್ನುಳ್ಳ ವಸ್ತು ವ್ಯಕ್ತಿ. ಅಥವಾ ವ್ಯಕ್ತಿತ್ವವನ್ನುಳ್ಳದು ವ್ಯಕ್ತಿ. ಹಾಗಾದರೆ ವ್ಯಕ್ತಿತ್ವವೆಂದರೇನು ? ವ್ಯಕ್ತಿತ್ವವೆಂದರೆ ತನ್ನತನ. ತನ್ನದೇ ಆದ ಭಾವ—ಸ್ವಭಾವ. ಇದೇ ವೈಶಿಷ್ಟ್ಯ. ಉಳಿದವರಿಂದ ಬೇರ್ಪಡಿಸುವ ಗುಣವಿಶೇಷ. ವಿಶೇಷ ಗುಣವಿಲ್ಲದ್ದು ವ್ಯಕ್ತಿಯೆನಿಸುದು.

ಎಲ್ಲರಂತೆ ಇದ್ದೂ ಎಲ್ಲರಿಂದ ವಿಂಗಡವಾಗಿ ತೋರುವ ವಿಶೇಷಾಂಶವು, ಕೆಲವೊಂದು ಪ್ರಮಾಣದಲ್ಲಿ ಪ್ರತಿಯೊಂದು ವಸ್ತು-ಜಾತದಲ್ಲಿ ಇದ್ದೇ ಇರುತ್ತದೆ. ಗಿಡಗಳು ಎನ್ನುವುದರಿಂದ ಅರಿಕೆಗೆ ಬರುವ ಬೇರು, ಬಡ್ಡಿ, ಎಲೆ ಮೊದಲಾದ ಸಾಮಾನ್ಯ ಸಂಗತಿಗಳನ್ನು ಬಿಟ್ಟರೂ ಮಾವಿನ ಠೀವಿಯೆ ಬೇರೆ. ಆಲದ ಹರಹೆ ಬೇರೆ; ಹಲಸಿನ ನಿಲುವೆ ಒಂದು. ಬಕುಳದ ರೀತಿಯು ಒಂದು. ಒಂದೊಂದು ಗಿಡದ ಪಾಂಗು ಬೇರೆ ಬೇರೆ ಒಂದರಂತೆ ಇನ್ನೊಂದಿಲ್ಲ. ಸೃಷ್ಟ ಪದಾರ್ಥಗಳ ಬಗೆಯೇ ಇಂತು ವಿವಿಧ

ವಸ್ತುಜಾತಗಳ ಹೊರಮೈಯಲ್ಲಂತೂ ಸರಿಯೇ. ಪ್ರಾಣಿಗಳ ಒಳಗೂ ವೈಶಿಷ್ಟ್ಯವಿರುವುದು ಅನುಭವಕ್ಕೆ ಬರುತ್ತದೆ. ಒಂದೊಂದು ಬಗೆಯ ಕುದುರೆ, ನಾಯ್ಗಳ ಸ್ವಭಾವವು ಒಂದೊಂದು ತೆರ. ಮೇಲ್ಪಟ್ಟದ

ಪ್ರಾಣಿಗಳಲ್ಲಿ ಇನ್ನೂ ವಿಶೇಷ. ಮನುಷ್ಯರೇ ಇದಕ್ಕೆ ಉತ್ತಮ ನಿದರ್ಶನ. ಮನುಷ್ಯರೆಲ್ಲರೂ ಕಣ್ಣು–ಮೂಗಿನವರೇ ಆದರೂ ಒಬ್ಬರಂತೆ ಇನ್ನೊಬ್ಬರ ಕಣ್ಣಿಲ್ಲ, ಮೂಗಿಲ್ಲ! ಉಳಿದುವುಗಳಂತೆ ಹೊರಗಣ ರೂಪ-ಆಕಾರ-ಬಣ್ಣಗಳ ವೈಶಿಷ್ಟ್ಯದ ಮೂಲಕ ಇವರಿಗೆ ವ್ಯಕ್ತಿ ಎಂಬುದು ಉಚಿತವಾಗಿರುವಂತೆ, ಒಳಗಣ ಗುಣವಿಶೇಷಗಳಿಂದಲೂ ಇವರಿಗೆ 'ವ್ಯಕ್ತಿ' ಎಂಬುದು ಪ್ರತಿಯೊಬ್ಬರಿಗೂ ಸಲ್ಲುವುದು. ಆದಕಾರಣ ಸಂಪೂರ್ಣ 'ವ್ಯಕ್ತಿ'ಗಳು ಮಾನವರೇ.

ಮೀನಾಕ್ಷಿ, ವಿಶಾಲಾಕ್ಷಿ, ಕಮಲಾಕ್ಷಿ, ಮದಿರಾಕ್ಷಿ, ಕಾಮಾಕ್ಷಿ, ಹರಿಣಾಕ್ಷಿ ಎಂದುಮುಂತಾಗಿ ಕಣ್ಣ ಸೊಬಗಿನಿಂದ ಕೆಲವರು ವ್ಯಕ್ತಿಗಳಾಗಿರ ಬಹುದು. ಉಷ್ಟ್ರಗತಿ, ಹಂಸಗಮನ, ಗಜಗಮನ ಎಂದು ಮಂತಾದ ನಡಿಗೆಗಳಿಂದಲೂ ಕೆಲವರು ವ್ಯಕ್ತಿಗಳೆನಿಸುತ್ತಿರಬಹುದು. ಸುರೂಪ ಕುರೂಪಗಳಿಂದ ವ್ಯಕ್ತಿತ್ವವು ಬರುವುದಾದರೆ ಸುಗುಣ–ದುರ್ಗುಣಗಳಿಂದ ವ್ಯಕ್ತಿತ್ವವನ್ನು ಸಂಪಾದಿಸಬಹುದಾಗಿದೆ.

ಅನಾಯಾಸವಾಗಿ ಬಂದುದರಲ್ಲಿ ವ್ಯಕ್ತಿಯ ಹಿರಿಮೆಯೇನು ? ಸ್ವಶ್ರಮದಿಂದ ಸಂಪಾದಿಸಿದುದಕ್ಕೆ ಬೆಲೆ ಹೆಚ್ಚು ಅಲ್ಲವೆ ? ಆದಕಾರಣ ಪ್ರಕೃತಿದತ್ತ ಸುರೂಪ-ಕುರೂಪದ ಬಾಹ್ಯ ವ್ಯಕ್ತಿತ್ವಕ್ಕಿಂತ ಸ್ವಂತದ ಪರಿಶ್ರಮ, ಸಂಸ್ಕೃತಿ ಸೂಚಕವಾದ ಆಂತರಿಕ ವ್ಯಕ್ತಿತ್ವದ ಮಹಿಮೆಯೇ ಅಪೂರ್ವ. ಲೋಕವಂದ್ಯರಾದ ಸಾಕ್ರೆಟೀಸ, ಗಾಂಧೀಜಿಯವರೆ ಇದಕ್ಕೆ ದೃಷ್ಟಾಂತ. ಇವರನ್ನು ಸುರೂಪಿಗಳೆಂದು ಹೇಳುವುದು ಅರಸಿಕತನವೆನಿಸದೆ ಇರದು. ಆದರೂ ಇವರು ತಮ್ಮತ್ತ ಲೋಕವನ್ನಾಕರ್ಷಿಸಿದ್ದು ಹೇಗೆ ? ಮನದ ಚೆಲುವಿನಿಂದಲೇ ಅಲ್ಲವೆ ? ಮೈಯ ಚೆಲುವು ವಯೋಮಾನದಂತೆ ಬಾಡುತ್ತದೆ. ಮನದ ಚೆಲುವು ವಯೋವೃದ್ಧಿಯಾದಂತೆ ಅಭಿವೃದ್ಧಿಯನ್ನು ಹೊಂದಬಲ್ಲದು, ಹಾಗೆ ಸರಿಯಾಗಿ ನಡಕೊಂಡಲ್ಲಿ ಮಾತ್ರ. ಹೊರಗಣದು ಹೆಚ್ಚಾಗಿ ಪೂರ್ವಾರ್ಜಿತ; ಒಳಗಣದು ಮುಖ್ಯವಾಗಿ ಸ್ವಾರ್ಜಿತ. ಇಪ್ಪತ್ತರ ಒಳಗಣ ಮೈಮನಗಳು ಹಿಗ್ಗುತ್ತಿರುವಲ್ಲಿ ವ್ಯಕ್ತಿಗೆ ಶ್ರೇಯಸ್ಸು ವಿಶೇಷವಿಲ್ಲ. ನಾಲ್ವತ್ತರ ಮುಂದಣ ವಯಸ್ಸಿನ ಮೊಗದಲ್ಲಿ

ಕಾಣುವ ಸಂತಸ, ಸು-ಹಾಸದ ಹೊಳಪು ಆ ವ್ಯಕ್ತಿಯು ನಿಸ್ಸಲ್ಮಷ ಮನದ ಸಾಕ್ಷಿ. ಈ ಅಂದದ ವೈಶಿಷ್ಟ್ಯವನ್ನು ಸಂಪಾದಿಸಲಿಕ್ಕೆ ವ್ಯಕ್ತಿಯು ಅವಿಶ್ರಾಂತ ಪರಿಶ್ರಮ ಪಡಬೇಕಾಗುತ್ತದೆ. ಸಾಧನೆ ಇಡಬೇಕಾಗುತ್ತದೆ ಇದುವೇ ತಪಸ್ಸು; ಎಂದರೆ ಕಾಯುವುದು. ಈ ತೇಜಸ್ಸು ಕಾಯ್ದ ಫಲ. ಕಾಯುವುದಕ್ಕೆ ತಾಳ್ಮೆಬೇಕು ತಾಳಿದುವೇ ಬಾಳುವುದು.

ಪ್ರದರ್ಶನ ಪ್ರೀತಿಯಿಲ್ಲದ ಮಾನವರೇ ವಿರಳ. ಚಿಗುರಿ ಹೊರ ಹೊಮ್ಮಬೇಕೆಂಬ ಹಂಬಲವು ಆಂತಃಶಕ್ತಿಯ ಆರೋಗ್ಯದ ಲಕ್ಷಣವು. ಸಾಕಾಗೋದು ಸಾವು ಸಮೀಪಿಸಿದ ಕುರುಹು; ಅನಾರೋಗ್ಯದ ಸೂಚನೆ. ಲೋಕಕ್ಕೆ ತಾನು ತೋರಬೇಕು - ಥೋರನಾಗಬೇಕು ದೋರನಾಗಬೇಕು ದೊರೆಯಾಗಿ ಮೆರೆಯಬೇಕೆಂಬ ಆಕಾಂಕ್ಷೆಯು ಮಾನವ ಜೀವಿಯಲ್ಲಿ ಹುಟ್ಟಿನಿಂದಲೆ ಅಂಕುರರೂಪದಲ್ಲಿರುತ್ತದೆ. ಇದೇ ಮಹತ್ವಾಕಾಂಕ್ಷೆ. ಮಹತ್ತಿನ ಆಕಾಂಕ್ಷೆ ಜೀವವನ್ನು ಧಾರಣಮಾಡಿರುವ ದೇಹ ಮತ್ತು ದೇಹವು ಬೆಳೆವ ನೆಲ ಹಾಗು ಸನ್ನಿವೇಶಗಳಿಗೆ ಅನುಗುಣವಾಗಿ ಮಹತ್ವಾಕಾಂಕ್ಷೆಯು ರೂಪಗೊಳ್ಳುವುದು; ಹಿರಿದು ಕಿರಿದಾಗುವುದು ಮಾನವರಲ್ಲಿ ವೈಯಕ್ತಿಕ ವೈಶಿಷ್ಟ್ಯಕ್ಕೆ ಕಾರಣವಾಗುವ ಗುಣವಿದು.

ಈ ಸಂದರ್ಭದಲ್ಲಿಯೆ ಮಾನವನಿಗೆ 'ಸಮಾಜ'ದ ಅಸ್ತಿತ್ವದ ಅನುಭವವು ಬರುವುದು. ಸಾಮಾನ್ಯರು ಅಸಾಮಾನ್ಯರಾಗಲು ಯಾರ ಮೆಚ್ಚಿಕೆಯನ್ನು ಹಾರೈಸುವರೊ ಅದುವೆ ಸಮಾಜ' ಅಥವಾ ವ್ಯಕ್ತಿಗಳು ಯಾರಿಂದ ಹೆಸರು ಪಡೆಯಬೇಕೆಂಬ ಉತ್ಕಟ ಆಕಾಂಕ್ಷೆಯಿಂದ ಹೆಣಗುವರೊ ಅದು ಸಮಾಜ ಅವ್ಯಕ್ತವಾಗಿದ್ದೂ ಅದು ವ್ಯಕ್ತಿಗಳನ್ನು ಆಳುತ್ತದೆ. ಕೃತಿಗಳಿಗೆ ಅನುಗುಣವಾಗಿ ವ್ಯಕ್ತಿಗಳಿಗೆ ಹೆಸರು ಬರುತ್ತದೆ. ತಾಯ್ತಂದೆಗಳು ತೊಟ್ಟಿಲಲ್ಲಿ ಇಟ್ಟ ಹೆಸರು ಬೇರೆ; ಮಾನವರು ಮನದಲ್ಲಿ ಆಶಿಸುವ ಹೆಸರು ಬೇರೆ ಸಮಾಜವು ಬಹಿರಂಗವಾಗಿ ಕೊಟ್ಟ ಹೆಸರು ಬೇರೆ. ಇವುಗಳಲ್ಲಿ ಕೊನೆಯ ಎರಡರಲ್ಲಿ ಮೇಳವಿದ್ದರೂ ಆ ವ್ಯಕ್ತಿಯು ತನ್ನ ಸಿದ್ಧಿಯನ್ನು ಪಡೆದಿತೆಂದು ಹೇಳಬಹುದು. 'ಮೋಹನ' ಎಂದು ತಾಯ್ತಂದೆಗಳು ತಮ್ಮ ಇಷ್ಟದಂತೆ ಕರೆಯುತ್ತಿರಬಹುದು. ಹೆತ್ತವರಿಗೆ ಹೆಗ್ಗಣವೂ

ಮುದ್ದು; ಆದರೆ ತಾನು ನಿಜವಾಗಿಯೂ ಲೋಕಮೋಹಕನಾಗಬೇಕೆಂದು ಆ ವ್ಯಕ್ತಿಯು ಕನವರಿಸುತ್ತಲೂ ಇರಬಹುದು. ಆದರೆ ಕೊನೆಗೆಯ ಪರೀಕ್ಷೆಯಲ್ಲಿ ಲೋಕ-ಸಮಾಜದಿಂದಲೂ 'ಮೋಹನ'ನೆಂದೇ ಹೆಸರು ಹೊಂದುವ ಭಾಗ್ಯವು ಕೋಟಿಕೋಟಿಗಳಲ್ಲಿ ಏಸು ಜನಕ್ಕೆ? 'ಪರೀಕ್ಷಕರ ಕಣ್ಣಲ್ಲಿ ಮಣ್ಣೆರಚಬೇಕೆಂಬ ವಿದ್ಯಾರ್ಥಿಗಳ ಚಪಲನಿಂದ್ಯ. ಸರಿಯಾಗಿ ಅಭ್ಯಾಸ ಮಾಡಿ ಪ್ರಾಮಾಣಿಕ ರೀತಿಯಿಂದ ಪರೀಕ್ಷೆಗಳಲ್ಲಿ ತೇರ್ಗಡೆಹೊಂದುವುದರಲ್ಲಿಯೇ ಅವರ ಕಲ್ಯಾಣವಿದೆ ಪರೀಕ್ಷಕರ ಕಣ್ಣಿಗೆ ಇಂಗು ಹಚ್ಚಿ ಎಂತೋ ಪಾಸಾಗಿ ಪದವಿಗಳನ್ನು ಪಡೆದ ಮಾತ್ರಕ್ಕೆ ನಿಜವಾದ ವಿದ್ಯೆ ಬಂದಂತಾಗಲಿಲ್ಲ. ಆದಕಾರಣ ಅಭ್ಯಾಸದ ಪರಿಶ್ರಮಗಳಿಗೆ ಬೇಸರಿಯದೆ ಚೆನ್ನಾಗಿ ದುಡಿದು ಅದರ ಸತ್ಫಲಗಳನ್ನು ಸವಿವಲ್ಲಿ ಇರುವ ಆನಂದ, ಸಮಾಧಾನ ಬೇರೆ ಯಾತಕ್ಕೂ ಬಾರದು........' ಎಂದು ಮುಂತಾಗಿ ಶಾಲೆಗಳಲ್ಲಿ ಶಿಕ್ಷಕರೂ ಮನೆಗಳಲ್ಲಿ ಪಾಲಕರೂ ಊರಲ್ಲಿ ನಾಗರಿಕರೂ ವ್ಯಾಸಪೀಠದಲ್ಲಿ ಮುಂದಾಳುಗಳೂ ಏಕಕಂಠದಿಂದ ಉಪದೇಶಗೆಯ್ಯುವುದುಂಟು. ಆದರೆ ಈ ಪ್ರವಚನಕಾರರಲ್ಲಿಯೆ ಹಲರು, ತಾವು ಶಿಷ್ಟರು, ವಿಶಿಷ್ಟರು, ಮಹಾವ್ಯಕ್ತಿಗಳು ಎಂದೆನಿಸಿಕೊಂಬ ಹವ್ಯಾಸದಿಂದ ವಿದ್ಯಾರ್ಥಿಗಳು ಪರೀಕ್ಷಕರೊಡನೆ ಆಡುವ ಆಟವನ್ನೇ ಇವರೂ ಸಮಾಜದೊಡನೆ ಹೂಡುವುದುಂಟು. ಪರೀಕ್ಷೆಯ ಪ್ರಶ್ನೆಗಳನ್ನು ಮುಂದಾಗಿಯೆ ಕಂಡುಹಿಡಿವ ಮಾಟವನ್ನು ಬಲ್ಲ ವಿದ್ಯಾರ್ಥಿಗಳು ಕೆಲವರಿದ್ದರೆ, ಸತ್ತ ಮತದಾರರನ್ನು ಚುನಾವಣೆಗಟ್ಟೆಗೆ ತಂದು ಮತಪಡೆವ ಮಾಂತ್ರಿಕನ ಸಾಮರ್ಥ್ಯವುಳ್ಳ ಹಿರಿಯರೆಂಬವರು ಹಲರು! ಯಾರಿಂದಲೊ ಬರೆಯಿಸಿ ತಮ್ಮ ಹೆಸರಿನಲ್ಲಿ ಪ್ರಕಟಿಸುವ ಚಪಲ! ಬೇರೆ ಗ್ರಂಥಗಳಿಂದ ಎತ್ತಿಕೊಂಡು ತಮ್ಮ ಪ್ರತಿಭೆಯ ಫಲವೆಂದು ಹೇಳುವ ಚಪಲ! ಪ್ರಸಿದ್ಧಿಯನ್ನು ಪಡೆಯುವುದಕ್ಕಾಗಿ ಸುಳ್ಳು ನಟನೆ ಮಾಡುವ ಚಪಲ! ಅಧಿಕಾರ, ಪದವಿ, ಪಟ್ಟಗಳನ್ನು ದೊರಕಿಸಲು ಸನಿಹದ್ದೆಂದು ಅಡ್ಡದಾರಿಯಿಂದ ಬೇಗ ಸಾಗುವ ಚಪಲ! ಜೀವನದ ಒಂದೊಂದು ರಂಗದಲ್ಲಿಯೂ ಹಲವೊಂದು ಬಗೆಯ ಚಪಲಗಳು, ವಿಶಿಷ್ಟತೆಯನ್ನುಳ್ಳ ವಿಶೇಷ ವ್ಯಕ್ತಿಯೆಂದೆನಿಸಿಕೊಳ್ಳಲು, ನಾನಾ ಸೋಗಿನಲ್ಲಿ

ಅಟಮಟದ ಕೈಚಳಕ, ಬಾಯ್‌ಚಳಕಗಳನ್ನು ಹಿರಿಯರಿಂದಲೆ ಮಾಡಿ ಸುತ್ತಿವೆ ! ಹಿರಿಯಕ್ಕನ ಚಾಳಿ ಮನೆಮಂದಿಗೆ ಅಥವಾ ಗುರುವಿನಂತೆ ಶಿಷ್ಯರು. ತರುಣರಿಗೆ ನಾಡಿನ ಹಿರಿಯರೆ ಅಲ್ಲವೆ ಮೇಲ್ಪಂಕ್ತಿ ? ತರುಣ ಜನಾಂಗದ ನೈತಿಕ ಮಟ್ಟವು ಅವರ ಹಿಂದಿನ ತಲೆಮಾರಿನ ಹಿರಿಯರಿಗಿಂತ ವಿಶೇಷ ಕೀಳು ಇಲ್ಲವೆ ಮೇಲು ಆಗಿರಲಾರದು. ಅಥವಾ ವಿಶೇಷ ವ್ಯತ್ಯಾಸವೇ ಇದ್ದುದಾಗಿದ್ದರೆ ಆ ಬಗೆಯ ಪ್ರತಿಕ್ರಿಯೆಗೆ ಆ ಕಾಲದ ಹಿರಿಯರೇ ಪರ್ಯಾಯದಿಂದ ಕಾಣರು.

ವ್ಯಕ್ತಿಯೆನಿಸಿಕೊಂಬ ಮಹತ್ವಾಕಾಂಕ್ಷೆಯು ರಾಜಮಾರ್ಗದಿಂದ ಕೈಗೂಡದೆ ಇದ್ದರೆ, ಅದು ವಕ್ರಮಾರ್ಗವನ್ನು ಅನುಸರಿಸುತ್ತದೆ. ಮನೆತನದ ಹಿರಿಯರಲ್ಲಿ ಸತ್‌ಪ್ರವೃತ್ತಿಯು ಜಾಗೃತ ಸ್ಥಿತಿಯಲ್ಲಿದ್ದ ಪ್ರಮಾಣದಲ್ಲಿ ಮಕ್ಕಳು ನೇರವಾದ ದಾರಿಯಿಂದ ಸಾಗುವರು ಸಮಾಜದಲ್ಲಿ ಸತ್‌ಪ್ರವೃತ್ತಿಯು ಊರ್ಜಿತದಲ್ಲಿರುವ ಪ್ರಮಾಣದಲ್ಲಿ ಮನೆತನಗಳೂ ಸಂಘಸಮಿತಿಗಳೂ ಗೌಣಸಾಧನಗಳನ್ನು ಉಪಯೋಗಿಸಲು ಮನಸು ಮಾಡವು. ಸಮಾಜವು ಆದರ್ಶವೆಂದು ಭಾವಿಸಿದ ವ್ಯಕ್ತಿಗಳ ಹಾಗೂ ಅದೇ ಸಮಾಜದೊಳಗಿನ ತೀರ ಕೆಳಮಟ್ಟದ ಹೀನಪ್ರವೃತ್ತಿಯವರೆಂದು ಹೆಸರಾದ ತಿರಸ್ಕೃತ ಸಮಾಜದೊಳಗಿನ ಕೀಳವ್ಯಕ್ತಿಗಳ, ಇವೆರಡೂ ಬಗೆಯವರು— ಹೊರಗೆ ಬಾಯ್‌ಮಾತಿನಲ್ಲಿ ಆಡುವ, ಅಲ್ಲ – ಅಂತರಾಳದಲ್ಲಿ ಹುದುಗಿಸಿಕೊಂಡು ಅನುಸರಿಸುತ್ತಿರುವ ನೈತಿಕ ಶ್ರದ್ಧೆಯ ಬೇರೀಜಿನ ಸರಾಸರಿಯೇ ಸಾಮಾಜಿಕ ಸತ್‌ಪ್ರವೃತ್ತಿಯ ಜಾಗೃತಸ್ಥಿತಿ. ಸತ್ಯವು ಅನಂತವಾಗಿದ್ದರೂ ಆಯಾ ಸಮಾಜದ ಪಾಲಿನ ಸತ್ಯದ ಪರಿಮಿತಿಯು ಇಷ್ಟೇ. 'ಸತ್ಯಮೇವ ಜಯತೇ' ಎಂಬದು ಪರಮ ಅರ್ಥದಲ್ಲಿ ವಾಸ್ತವವಲ್ಲ. ಸಮಾಜದಲ್ಲಿರುವ ಸತ್ಯದ ಅರಿವಿನ ಉದ್ದಗಲಗಳಲ್ಲಿ ಹಿಡಿಸಲಾರದ ಹೊಸ ಸತ್ಯಕ್ಕೆ ಆ ಕಾಲದಲ್ಲಿಯೆ ಅಥವಾ ಆಗಲೇ ಗೆಲುವು ದೊರೆಯುವುದು ಎಂತೊ ! ಭೂಲೋಕದಲ್ಲಿ ಆಧಾರವಿಲ್ಲದ ಜನತೆಯ ಮನೋಬುದ್ಧಿಗಳಲ್ಲಿ ಪ್ರವೇಶದೊರೆತು ಇಂಬುಗೊಳ್ಳದ ಸತ್ಯವು, ಇನ್ನೂ ಉದಯಿಸಲಿರುವ ಮಹಾನಕ್ಷತ್ರದಂತೆ; ಅದರ ಕಿರಣಗಳು ಲೋಕದ ಕಣ್ಣಿಗೆ ಇನ್ನೂ ನಿಲುಕುವುದಿಲ್ಲ. ಸಾಮಾಜಿಕ

ನೀತಿ—ಅನೀತಿಗಳನ್ನು ತೂಗಿ ನಿರ್ಣಯಿಸುವಾಗ ಆಯಾ ಕಾಲದಲ್ಲಿ ಬಳಕೆಯಲ್ಲಿದ್ದ ತೂಕ-ಮಾಪುಗಳನ್ನು ಉಪಯೋಗಿಸುವುದು ನ್ಯಾಯ. ಸಾರ್ವಕಾಲಿಕವಾದ ಸತ್ಯದ ಕೋಷ್ಟಕು ಅಲ್ಲಿ ನಿರುಪಯುಕ್ತ. ಹಾಗೆ ಮಾಡುವದು ಅನ್ಯಾಯ.

ಸಮಾಜವು ಮನಸಾ ಒಪ್ಪಿಕೊಂಡ ಸತ್ಯದ—ನ್ಯಾಯ ನೀತಿಯ ಮೇರೆ ಮೀರಿ ನಡೆದು ಬಾಳಲು ಯಾವ ಕುಟುಂಬಸ್ಥನೂ ಧೈರ್ಯಮಾಡಲಾರನು ಸಮಾಜದ ಇಚ್ಛಾಶಕ್ತಿಯ ಮುಂದೆ ಸರಕಾರಕ್ಕೂ ತಲೆವಾಗಬೇಕಾಗುವುದು. ಸಮಾಜಕ್ಕೆ ಸಮ್ಮತವಿಲ್ಲದ ಕಾಯಿದೆಗಳು ಕಾಯಿದೆ ಪುಸ್ತಕಗಳಲ್ಲಿಯೇ ಉಳಿಯುವುವು ಸರಕಾರಕ್ಕಿಂತಲೂ ಸಮಾಜದ ಈಶ ಶಕ್ತಿಯು ವಿಶೇಷ ಪ್ರಭಾವಶಾಲಿಯೆಂಬುದನ್ನು ಇಲ್ಲಿ ಮನಗಾಣಬಹುದು. ಆದರೆ, ತಾವು ಕಂಡ ಅಥವಾ ಬಗೆದು ಭಾವಿಸಿಕೊಂಡ ಸತ್ಯದ ಒರೆಗಲ್ಲಿಗೆ ಸಮಾಜದ ಕೆಲವೊಂದು ರೀತಿ ನೀತಿಗಳು ಸರಿಹೋಗುತ್ತಿದ್ದಿಲ್ಲವಾದರೆ, ಅಂತಹರು ತಮ್ಮ ವಿಚಾರಗಳನ್ನು ಜನರೆದುರಿಗೆ ಮಂಡಿಸಿ ಸಮಾಜದಲ್ಲಿ ತಮ್ಮ ಸತ್ಯದ ಹೊಸ ಅರಿವನ್ನು ತಂದು ಕೊಡುವುದು ಅವರ ಕರ್ತವ್ಯವಾಗಿದೆ. ಇದು ಮಹಾವ್ಯಕ್ತಿಗಳ ದಾರಿ. ಇವರು ಸಮಾಜದ ಪುರಸ್ಕಾರ ಅಥವಾ ತಿರಸ್ಕಾರಗಳನ್ನು ಲೆಕ್ಕಿಸದೆ ತಮ್ಮದೇ ಆದ ದಾರಿಯಲ್ಲಿ ಮುಂದುವರಿಯುತ್ತಾರೆ. ನಿಜವಾದ ಲೋಕಕಲ್ಯಾಣಕ್ಕಾಗಿ ತಾವು ಮನಗಂಡುದನ್ನು ಹೆದರಿ ಹೇಳದೆ ಇದ್ದರೆ ಸತ್ಯಕ್ಕೆ ಅನ್ಯಾಯ ಮಾಡಿದಂತಾಗುವುದೆಂಬ ಆಂತರಿಕ ಒತ್ತಾಯದ ಮೂಲಕವಾಗಿ ಇವರು ಸಮಾಜದ ಕೋಪಕ್ಕೆ ಗುರಿಯಾಗಲಿಕ್ಕೂ ಸಿದ್ಧರಾಗುತ್ತಾರೆ. ಪ್ರವಾಹದ ಎದುರು ಈಜುವ—ಸಂಕಟಕ್ಕೆ ಆಹ್ವಾನಿಸುವ ದಾರಿಯಿದು. ವ್ಯಕ್ತಿಯ ಸತ್ವಪರೀಕ್ಷೆಯಾಗಿ ಅದಕ್ಕೆ ತಕ್ಕಂತೆ ಅದರ ಬೆಳಕು ಹೊರಬೀಳುವುದು.

ಸಾಮಾನ್ಯರಿಗೋ ಇಷ್ಟು ಎದೆಗಾರಿಕೆ ಎಲ್ಲಿ? ಸಾಹಸದ ಕಷ್ಟನಷ್ಟಗಳಂತೂ ಮೊದಲು ಬೇಡ. ಇಂತಹರು ಪಾಪ, ತಮ್ಮ ಉಪಜೀವನದ ಸುಲಭ ಮಾರ್ಗವನ್ನು ಕಂಡುಕೊಂಡು, ಪರಿಷಿಯ ಕೂಡ ಜಾತ್ರೆಯೆಂಬಂತೆ ಹೊರಡುವರು. ಗಾಳಿಬೀಸಿದತ್ತ ತಿರುಗುವುದು ಇವರ ಸ್ವಭಾವ. ಆದರೆ

ಇನ್ನು ಕೆಲರು ಈ ವರ್ಗದಲ್ಲಿಯೆ ಸೇರಿಕೊಂಡಿದ್ದರೂ ಅವರ ಕೊಂಬು ಇನ್ನೂ ಮುರಿದಿರುವುದಿಲ್ಲ. ಒಳಗೊಳಗೆ ಅತೃಪ್ತ ಮಹತ್ವಾಕಾಂಕ್ಷೆಗಳು ಹಾಗೆಯೆ ಕುದಿಯುತ್ತಿರುತ್ತವೆ. ಪರಿಸ್ಥಿತಿಗೆ ಬೈಯುತ್ತ, ದೈವಕ್ಕೆ ಶಪಿಸುತ್ತ, ತಮ್ಮ ಹೇಡಿತನಕ್ಕಾಗಿ ಸಮಾಜಕ್ಕೆ, ಸಮಾಜದೊಳಗಿನ ಇನ್ನಾರಿಗೊ ಹರಿಹಾಯ್ದು ತೆಗಳುತ್ತ—ಬೊಗಳುತ್ತ ಕಾಲಹರಣ ಮಾಡುತ್ತಿರುತ್ತಾರೆ. ಇಂತಹರಲ್ಲಿ ಸ್ವಲ್ಪ ಚುರುಕಾಗಿದ್ದವರು ಸಂಧಿಸಾಧಿಸಿ 'ಏನಕೇನ ಪ್ರಕಾರೇಣ' ತಮ್ಮ ಕಾಲು ಚಾಚಲು ಹವಣಿಸುವರು. ಕೈಸಾಧಿಸುವದೇ ನೋಡುವರು, ಪಂಕ್ತಿಯಲ್ಲಿ ಬಡಿಸುವುದಕ್ಕೆಂದು ನಿಂತು, ತಮ್ಮ ಹಾಗೂ ತಮ್ಮವರ ಎಲೆಯ ಮೇಲೆ ಸಾರ್ವಜನಿಕ ತುಪ್ಪ ಸುರುವಿ ಉಪಕಾರಕರ್ತರೆಂದು ಹೆಸರಾಗುವರು.

ವ್ಯಕ್ತಿತ್ವಕ್ಕಾಗಿ ವ್ಯಕ್ತಿತ್ವವನ್ನು ಪಡೆವ ಹುಚ್ಚು ಹಲವರಿಗೆ. ನಗರ ಸಭೆಯ ಸದಸ್ಯ, ಸಂಘಸಮಿತಿಯ ಅಧ್ಯಕ್ಷ, ಕಾರ್ಯದರ್ಶಿ ಅಥವಾ ಇಂತಹ ಇನ್ನು ಯಾವುದಾದರೂ ಗೌರವದ ಸ್ಥಳಗಳನ್ನು ಆಕ್ರಮಿಸುವ ಪರಾಕ್ರಮಿ ವ್ಯಕ್ತಿಗಳಿವರು. ತಾವು ಸ್ವೀಕರಿಸಬೇಕೆಂದಿರುವ ಸ್ಥಾನದಲ್ಲಿ ನಿಂತು, ತಮ್ಮಿಂದ ಆ ಸ್ಥಾನದ ಗೌರವಕ್ಕೆ ಸರಿಯಾದ ಕೆಲಸ ಮಾಡಲು ಸಾಧ್ಯವೆ? ಅಂತಹ ಯೋಗ್ಯತೆಯಿದೆಯೆ ? ಆ ಯೋಗ್ಯತೆಯನ್ನು ತಂದುಕೊಳ್ಳಲು ಪ್ರಯತ್ನ ನಡೆದಿದೆಯೆ ? ಎಂಬೀ ತೆರನಾಗಿ ಆತ್ಮನಿರೀಕ್ಷಣೆಗೆ ಇವರ ಮನಸ್ಸು ಸಿದ್ಧವಿರುವದಿಲ್ಲ. ಒಳಗೆ ಹುರುಳಿಲ್ಲವೆಂದು ತಿಳಿದಿದ್ದರೂ ಪ್ರತಿ-ಷ್ಠಿತ ವ್ಯಕ್ತಿಯೆನಿಸಿಕೊಂಬ ಆಶೆಬುರುಕತನದಿಂದ ಸಮಾಜದೊಳಗಿನ ಆಯ ಕಟ್ಟಿನ ಮೆಟ್ಟುಗಳನ್ನು ವಶಪಡಿಸಿಕೊಳ್ಳುವ ಹೊಂಚುಹಾಕುತ್ತಾರೆ. ಪ್ರಾಸಾದ ಶಿಖರದ ಮೇಲೆ ಕುಳಿತರೂ ಕಾಗೆಯು ಗರುಡವೆನಿಸಲಾರದೆಂದು ಸುಭಾಷಿತಕಾರನು ನಕ್ಕಿದ್ದರೂ ಈ ನಗೆಯ ಕೊಂಕು ತಿಳಿಯುವಷ್ಟು ಸಜ್ಜನಿಕೆಯು ಈ ವರ್ಗದಲ್ಲಿ ಜೀವಂತವಿದ್ದರೆ, ಅವರು ತಮ್ಮ ಮರ್ಯಾದೆಯನ್ನು ಬಿಟ್ಟು ಹೊರಗೆ ಬರಲು ಎಂದೂ ಇಷ್ಟಪಡುತ್ತಿದ್ದಿಲ್ಲ. ಪರರ ಆಕ್ರಮಣ ಮಾಡುವುದೇ ಪರಾಕ್ರಮವೆಂದು ಇವರ ಗ್ರಹಿಕೆಯಾಗಿರುತ್ತದೆ.

ಬೂಟು-ಸೂಟನಿಂದ ಬೆಲೆ ಬರುತ್ತಿದ್ದರೆ ಅದನ್ನು ಧರಿಸುವರು; ಖಾದಿ ಹಾಕಿಕೊಂಡಲ್ಲಿ ಮನ್ನಣೆಯಿದ್ದರೆ ಅದೂ ಸರಿಯೇ. ಹೆಸರಿನ ಹಿಂದು

ಮುಂದಿನ ಪದಗಳಿಗೆ ಮಹತ್ವವಿದ್ದರೆ ಅದನ್ನು ಪಡೆದುಕೊಳ್ಳಲಿಕ್ಕೆ ಏನುಬಿದ್ದರೂ ಕೊಡಲು ಸಿದ್ಧ. ರಾವಸಾಹೇಬ, ರಾವಬಹಾದ್ದೂರ ಬೇಡವಾದರೆ ಅವನ್ನು ಎಸೆದು ದೇ ಭ. ರ ಸಾಲಿನಲ್ಲಿ ಸೇರಲು ಸಂಕೋಚವಿಲ್ಲ. ದೇ ಭ ಇದು 'ದೇಶಭಕ್ತ' ಎಂಬುದರ ಸಂಕ್ಷೇಪವಲ್ಲ; 'ದೇಶಭಕ್ಷಕ' ಎಂಬುದರ ಸಂಕೇತವೆಂದು ಟೀಕೆ ಬಂದರೆ, ಆಗಲಿ; ಇನ್ನು ಅಧಿಕಾರದಲ್ಲಿ ಬರುವ ಪಕ್ಷವಾವುದು? ಭಾಯಿ, ಸಾಥಿ, ಅಥವಾ ಕಾಮ್ರೇಡ ಏನೆಂದರೂ ಸಮ್ಮತ. ಯಾವ ಪದಸಮುಚ್ಚಯಗಳಿಂದ ಜನ ಮೆಚ್ಚಿ ಮಂಕುಗೊಳ್ಳಬಹುದೊ ಅವುಗಳನ್ನು ನಾಮಾಭಿಧಾನದ ಮುಂದೆ ಅಥವಾ ಹಿಂದೆ ಜೋಡಿಸಲು ಯಾವ ಕ್ಷಣಕ್ಕೂ ಒಪ್ಪಿಗೆ. ಇದರೊಡನೆ ಬ್ಯಾಂಕ ಶಿಲ್ಕಿನ ಕಾಗದಗಳಷ್ಟು ಸೇರಿದರೆ ಆ ವ್ಯಕ್ತಿವೈಶಿಷ್ಟ್ಯವೇ ಒಂದು. ವ್ಯವಹಾರದ ಪೇಟೆಯಲ್ಲಿ ತಮ್ಮ ಬೆಲೆಯನ್ನು ಹೆಚ್ಚಿಸಿಕೊಳ್ಳಲು ಜೀವವು ಬಗೆಬಗೆಯಾದ ಹಂಚಿಕೆಗಳನ್ನು ಹುಡುಕಿಕೊಳ್ಳುತ್ತದೆ. ಇಂಗ್ಲಂಡ ರಿಟರ್ನಡ್ ಎಂದರೆ ಜನ ಬುದ್ಧಿವಂತನೆಂದು ಬಗೆಯುವರೊ ? ಅಮೇರಿಕೆಯಿಂದ ಮರಳಿದವನೆಂದರೆ ಮೆಚ್ಚಿಕೊಳ್ಳುವರೊ ? ಅಥವಾ ರಶಿಯಾದ ಲೆನಿನ್, ಸ್ಟಾಲಿನ್‌ರ ಗುಟ್ಟನ್ನು ಅರಿತವನೆಂದರೆ ಬೇಗ ಬೆಪ್ಪಾಗುವರೊ ? ಕವಿ, ಸಾಹಿತಿ, ಕಲಾವಿದ, ಸಂಶೋಧಕ, ತತ್ವಜ್ಞಾನಿ, ರಾಜಕಾರಣಿ, ಭಕ್ತ, ಶರಣ, ದಾಸ—ಯಾವ ವೇಷದಿಂದ ದುಡ್ಡುದೊರೆತು ಗೌರವ ಸಿಕ್ಕುವುದೊ ಜೀವನ–ನೌಕೆಯ ವಿಜಯಯಾತ್ರೆಯು ವಿಜೃಂಭಣೆಯಿಂದ ಜರುಗುವುದೊ ಆ ದಾರಿ ಇವರದು.

ವ್ಯಕ್ತಿತ್ವವನ್ನು ಪಡೆವ ಮಹತ್ವಾಕಾಂಕ್ಷೆಯಿಂದ ಮುನ್ನುಗ್ಗಲ್ಪಡುತ್ತಿರುವ ಪ್ರತಿಯೊಬ್ಬರೂ ಸಾಮಾನ್ಯವಾಗಿ ಇಂತಹ ಸುಳಿಯಲ್ಲಿ ಸ್ಥೂಲ ಅಥವಾ ಸೂಕ್ಷ್ಮ ರೂಪದಲ್ಲಿ ಒಮ್ಮೆಯಾದರೂ ಸಿಲುಕಿಕೊಳ್ಳುವರಾದರೂ ಪ್ರಾಮಾಣಿಕರಿದ್ದವರು ಕೈಕೊಂಡ ಕೆಲಸಕ್ಕೆ ಅವಶ್ಯಕವಾದ ಜ್ಞಾನ-ಶಕ್ತಿಗಳನ್ನು ಬೇಗನೆ ಗಳಿಸಿಕೊಂಡು ತಮ್ಮ ಅರ್ಹತೆಯನ್ನು ಕಾರ್ಯರೂಪದಿಂದ ಲೋಕನಿದರ್ಶನಕ್ಕೆ ತಂದು ಕೊಡುವರು. ವ್ಯಕ್ತಿತ್ವವನ್ನು ಪಡೆವ ಹಂಬಲವು ತಿಳಿವಳಿಕೆ ಬಂದಂತೆ ಅಳಿಯುವುದು. ಕೇವಲ ವ್ಯಕ್ತಿತ್ವಕ್ಕಾಗಿ ಒದ್ದಾಟ, ಶುದ್ಧ ಡಂಭಾಚಾರ; ತನ್ನ ಯೋಗ್ಯತೆಯನ್ನು ತೂಗಿಕೊಂಡು ಅದಕ್ಕೆ

ತಕ್ಕಂತಹ ಲೋಕಹಿತದ ಯಾವುದೊಂದು ಕೆಲಸವನ್ನು ನೆರವೇರಿಸುವುದಕ್ಕಾಗಿ ತತ್ವನಿಷ್ಠೆಯಿಂದ ಕಾರ್ಯಪ್ರವೃತ್ತರಾದ ಪ್ರಾಮಾಣಿಕರಿಗೆ ವ್ಯಕ್ತಿತ್ವವು ತನ್ನತಾನೆ ಅನುಸರಿಸುವುದು. ಏನಾದರೂ ಮಾಡಿ ಹೆಸರು ಗಳಿಸುವ ರೀತಿ ಇವರಿಗೆ ಒಗ್ಗದು. ಹೆಸರು ಗಳಿಸುವ ಗಡಿಬಿಡಿಯ ಜನರು ತಮ್ಮ ಹೆಸರು ಕೆಡಿಸಿಕೊಳ್ಳುವಲ್ಲಿ ಸಂದೇಹವೇ ಇಲ್ಲ. ಇಷ್ಟೇ ಅಲ್ಲ; ಇವರ ಕೈಕೊಂಡ ಕೆಲಸವೂ ಹಸಗೆಡುವುದು. ಇಂತಹರು ಸಮಾಜದ ಅವನತಿಗೆ ಕಾರಣರಾಗುತ್ತಾರೆ. ಯೋಗ್ಯತೆ ಇಲ್ಲದೆ ಅಥವಾ ಅದನ್ನು ಮೀರಿ, ಹೆಸರಿನ ಹುಚ್ಚಿನಿಂದಲೇ ಮುಂದೆಬಂದು ಮೆರೆದಾಡುವವರನ್ನೂ ಆದರ್ಶರೆಂದು ಯಾವ ಸಮಾಜವು ತನ್ನ ತಲೆಯ ಮೇಲಿರಿಸಿಕೊಳ್ಳುವುದೊ ಅದು ತನ್ನ ಅಧಃಪಾತದ ಪೂರ್ವಸಿದ್ಧತೆಯನ್ನೇ ನಡೆಸುತ್ತದೆ. ೨ನೆಯ ಬಾಜೀರಾಯನಂತಹನು ರಾಜನಾಗುವುದು; ಸಮಾಜವು ಅದನ್ನು ವಿರೋಧಿಸದೆ ತೆಪ್ಪಗಿರುವುದು; ಇಂತಹ ಕೃತಿಗಳ ಘೋರ ಪರಿಣಾಮವನ್ನು ಅನುಭವಿಸಿರುವ ಭಾರತವೂ ಆದರ ಪ್ರಾಂತಗಳೂ ಮತ್ತೆ ಅದೇ ದಾರಿಯಲ್ಲಿ ಹೊರಟರೆ ಅದರಂತಹ ದುರ್ದೈವವು ಬೇರೊಂದಿಲ್ಲ. ತತ್ವಾನುಸಂಧಾನದಿಂದ ಜೀವನ ಪಥದಲ್ಲಿ ಮುಂದುವರಿಸುತ್ತಿರುವ ಪರಿಶುದ್ಧಚಿತ್ತರ ವ್ಯಕ್ತಿತ್ವಕ್ಕೆ ಒಂದು ತೇಜೋವಲಯವು ತನ್ನತಾನೆ ಹಿಂಬಾಲಿಸುವುದನ್ನು ಎಲ್ಲರೂ ಬಲ್ಲರು. ಆದರೆ ಅಷ್ಟು ಕಷ್ಟ ಯಾರು ಎದುರಿಸಬೇಕು ? ತೊಂದರೆಗಳನ್ನು ಅನುಭವಿಸಿಯೂ ನಡಸುವ ಲೋಕಹಿತಕಾರಕ ಕೃತಿಗಳಿಂದ ಇವರ ವ್ಯಕ್ತಿತ್ವವು ಬೆಳಗುವುದು. ಇವರ ಹೆಸರು ದೇವಕೋಟಿಗೆ ಸೇರುವುದು. ದೇವರಿಗೆ ನೆರಳು ಇರುವದಿಲ್ಲವೆಂದು ಹೇಳುವ ವಾಡಿಕೆಯನ್ನು ಇಲ್ಲಿ ನೆನೆದುಕೊಳ್ಳಬಹುದು. ಇವರ ನಾಮಸ್ಮರಣೆಯು ಆಯಾ ತತ್ವಾಭಿಮಾನಿ ಸಾಧಕರಿಗೆ ತಾರಕಮಂತ್ರವಾಗುವುದು.

ತತ್ವನಿಷ್ಠರೇ ನಿಜವಾದ ಆಸ್ತಿಕರು. ತಾವು ಕಂಡ ಸತ್ಯದಲ್ಲಿ ನಿಷ್ಠೆಯುಳ್ಳವರಾಗಿ, ಲೋಕಹಿತಕ್ಕಾಗಿ ಅದರ ಅನುಷ್ಠಾನದಲ್ಲಿಯೇ ಆನಂದಗೊಳ್ಳುವುದು ಇವರ ಸ್ವಭಾವ. ಈ ಬಗೆಯವರಲ್ಲಿ ಕೆಲರು ದೇವರೆಂಬ ವಿಶಿಷ್ಟರೂಪ ಆಕಾರದ ವಸ್ತುವಿನಲ್ಲಿ ನೆಮ್ಮಿಕೊಂಡಿರಲಿಕ್ಕಿಲ್ಲ ಆದರೂ

ಅವರು ಆಸ್ತಿಕರೇ. ಸತ್ಯವೇ ದೇವರು. ಆದುದರಿಂದ ತಾವು ಅರಿತ ಸತ್ಯದಲ್ಲಿ ಶ್ರದ್ಧೆಯಿಟ್ಟು, ಯಾರ ವಿರೋಧವನ್ನೂ ಗಮನಿಸದೆ ಅದರಂತೆ ನಡೆವ ಪ್ರಾಮಾಣಿಕರು ಆಸ್ತಿಕರಲ್ಲದೆ ಇದ್ದರೆ, ಶಿವ-ವಿಷ್ಣು ಮೊದಲಾದ ದೇವರ ಭಕ್ತರೆಂದೆನಿಸಿ, ನಾಮ-ಮುದ್ರೆ-ವಿಭೂತಿಗಳನ್ನು ಬಡಿದುಕೊಂಡು, ಒಳಗೊಂದು ಹೊರಗೊಂದು ತೆರನಾಗಿ ವರ್ತಿಸುವ ವಂಚಕರು ಆಸ್ತಿಕರೊ? ಧನ, ಮಾನ ಅಥವಾ ಕೀರ್ತಿಗಾಗಿ, ಪದವಿ-ಪಟ್ಟಗಳನ್ನು ಪಡೆಯುವುದಕ್ಕಾಗಿ ಬೇಕಾದ ಸಾಧನಗಳನ್ನೂ ಉಪಯೋಗಿಸಿಕೊಳ್ಳಲು ಹೇಸದ ಸಂಧಿಸಾಧಕರು ಎಷ್ಟೋ ದೇವತಾರ್ಚನೆ, ಸ್ವಾಮಿ ಪೂಜೆಗಳನ್ನು ನಡಸುತ್ತಿದ್ದರೂ ಅಥವಾ ಆಧುನಿಕ ಪ್ರಕಾರದ ಧಾರ್ಮಿಕ ಸೋಗುಗಳನ್ನು ಹಾಕುತ್ತಿದ್ದರೂ ಅವರು ಶುದ್ಧ ನಾಸ್ತಿಕರೇ ಸರಿ. ಇವರು ದೇವರು, ಧರ್ಮ, ಪರೋಪಕಾರಗಳ ಲಾಭವನ್ನು ತಮ್ಮ ಕ್ಷುದ್ರ ಸ್ವಾರ್ಥಸಾಧನೆಗಾಗಿ ಮಾಡಿಕೊಳ್ಳುವರು. ದೇವರನ್ನೂ ವಂಚಿಸುವ ಹಂಚಿಕೆಗಾರರು ಏಕೆಂದರೆ ದೇವಕಾರ್ಯಕ್ಕೆ (ಎಂದರೆ ಸತ್ಯಪ್ರವೃತ್ತಿಯ ಅಭಿವೃದ್ಧಿಗೆ) ಇವರು ನೆರವಾಗುವ ಬದಲು ದೇವರನ್ನೆ ತಮ್ಮ ಕೆಲಸಕ್ಕೆ ಬಳಸುವರು!

ಕೈಕೊಂಡ ಕಾರ್ಯದ ಅಂತರ್ಗತ ಹಿರಿಮೆಯನ್ನು ಮನಗಂಡು ಶ್ರದ್ಧೆಯಿಂದ ಅದರಲ್ಲಿ ತೊಡಗುವವರೆ, (ಆ ಕಾರ್ಯದಲ್ಲಿ ಸತ್ಯವು 'ಅಸ್ತಿ' ಎಂಬ ನೆಚ್ಚಿಕೆಯು) ಆಸ್ತಿಕರು. ಒಳಗೆ ಹುರುಳಿದೆಯೆಂದು ಎಲ್ಲಿಯೂ ಮನವರಿಕೆಯಾಗಿಲ್ಲ; ಅರ್ಥವಿಹೀನ, ನಿಷ್ಪ್ರಯೋಜಕವೆಂದು ಒಪ್ಪಿಕೊಳ್ಳುತ್ತಿದ್ದೂ ಯಾವುದೊಂದು ಕಾರ್ಯದಲ್ಲಿ ಕೇವಲ ದುಡ್ಡಿಗಾಗಿ ಅಥವಾ ಪ್ರತಿಷ್ಠೆ ಪಡೆಯುವುದಕ್ಕಾಗಿಯೇ ಯಾರು ಸೇರುವರೊ (ನ ಅಸ್ತಿ ಎಂಬವರಾದ್ದರಿಂದ) ನಿಜವಾಗಿಯೂ ಇವರು ನಾಸ್ತಿಕರೇ. ಒಳಗಿನ ಬೆಳಕಿನ ಭಕ್ತರು ಆಸ್ತಿಕರು. ಹೊರಗಿನ ಹೊಳಪಿಗೆ ಮರುಳಾದವರು ನಾಸ್ತಿಕರು. ಒಳಬೆಳಕಿನ ಸತ್ವ) ಪೂಜಕರು ಸ್ವಯಂ ಪ್ರಕಾಶದ ವ್ಯಕ್ತಿಗಳಾಗುತ್ತಾರೆ. ಹೊರಮಿಂಚಿಗೆ ಮನಸೋತವರು ದೀಪದ ಹುಳದಂತೆ ದುರಾಶೆಯ ಕಿಚ್ಚಿನಲ್ಲಿ ಬೆಂದುಬೆಂಡಾಗುವರು. ಮೊದಲನೆಯವರು ಮುಟ್ಟಿದ ವಸ್ತುವಿಗೆ ಹೊನ್ನ ಬೆಲೆ ಬಂದರೆ, ಎರಡನೆಯವರು ಹೊನ್ನಿನಿಂದ ತಮ್ಮ ಬೆಲೆಯನ್ನು ಹೆಚ್ಚಿಸಿಕೊಳ್ಳಲು ಹಂಬಲಿಸುತ್ತಾರೆ. ಮೊದಲನೆಯರು ಪರಿಸ್ಥಿತಿಯ ನಿರ್ಮಾತೃಗಳಾದರೆ ಎರಡನೆಯವರು ಪರಿಸ್ಥಿತಿಯ ಕುನ್ನಿಗಳು. ಮೊದಲನೆಯವರು ತಮಗೆ,

ಅತಿತರಾಳದಲ್ಲಿ ಸತ್ಯವೆನಿಸಿದ್ದು ನಿಷ್ಠುರ ಸತ್ಯವಾದರೂ ಸಮಾಜದ ಹಿತಕ್ಕಾಗಿ ಹೇಳಲು ಹಿಂಜರಿಯದ ನೈತಿಕ ಧೈರ್ಯಶಾಲಿಗಳಾದರೆ, ಎರಡನೆಯವರು ಅಂತಃಸಾಕ್ಷಿಯು ಕಣ್ಣು ಕಳೆದು ತಮ್ಮ ಕೆಲಸ ಸಾಧಿಸಲು ಏನನ್ನೂ ಮಾಡಲು ಹಿಂಜರಿಯದ ಅವಿವೇಕಿ ಸಾಹಸಿಗಳು.

ಸಮಾಜದ ಇವೆರಡೂ ಶಕ್ತಿಗಳ ಸಮೀಪದಲ್ಲಿ 'ಎಂದುದನೆ ಎಂದು ಬಾಳ್ವ' ವ್ಯಕ್ತಿಗಳು ಹಲವೊಂದು ಎಂದುದನೆ ಎಂದು ಬಾಳ್ವಲ್ಲಿ ಯಾರಿಗೂ ನಿಜವಾದ ಆನಂದವಿಲ್ಲ ಆದರೂ ಈ ಪ್ರಸಂಗವು ಏಕೆ ಬರುತ್ತದೆ? ಜೀವ ನವು ಸುಸೂತ್ರವಾಗಿ ಸಾಗಲೆಂದು; ಧನಾಶೆಯಿಂದ; ಕೆಲವೊಂದು ಕಾರ್ಯ ಸಾಧನೆಗಾಗಿ ಧನಾಶೆಯಿಂದ; ಕೆಲವೊಂದು ಕಾರ್ಯ ಸಾಧನೆಗಾಗಿ; ಗುಣಕ್ಕೆ ಮೆಚ್ಚಿ; ಪ್ರಭಾವಕ್ಕೆ ಮಾರುಹೋಗಿ; ಮರುಳಾಗಿ; (ಅವ ) ಪರಿಪೂರ್ಣರೆಂಬ ಭ್ರಾಂತಿಯಲ್ಲಿ; ತಿಳಿಗೇಡಿತನದ ಮೂಲಕ; ಏರುದಾರಿಯ ಕಷ್ಟಕ್ಕೆ ಹೆದರಿ; ಪ್ರವಾಹಪತಿತರಾಗಿ; ರೂಢಿ ಸಂಪ್ರದಾಯ ಗಳ ಚಕ್ರದಲ್ಲಿ ಸಿಲುಕಿ; ನರಕದ ಭೀತಿಯಿಂದ; ಸ್ವತಂತ್ರ ವಿಚಾರ ಹೊಳೆ ಯದ್ದಕ್ಕೆ; ನಿರ್ಗತಿಕರಾಗಿ............ಇಂತಹ ಜನ ತಮ್ಮ ಸ್ವತ್ವವನ್ನು ಕಳೆದುಕೊಳ್ಳುತ್ತಾರೆ; ಅಂದಗೇಡಿಗಳಾಗುತ್ತಾರೆ; ಬೆಳಕು ಕಳೆಗುಂದಿ ನಿಸ್ತೇಜ ರಾಗುತ್ತಾರೆ; ಪರಪ್ರತ್ಯಯನೇಯಬುದ್ಧಿಗಳಾಗುವರು. ಮೊದಲು ಇವ ರೊಳಗಿನ ಸ್ವಂತ ಬುದ್ಧಿಯ ಎದುರು ಹಲವಾರು ಶಂಕೆಗಳು ಬಂದು ನಿಲ್ಲು ತ್ತವೆ ಎಂದುದನೆ ಎನ್ನದಿರಲು, ಪ್ರಾಮಾಣಿಕವಾದ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಲು ಆದೇಶಿಸುತ್ತವೆ. ತಲೆದೋರಿದ ಪ್ರಾಮಾಣಿಕ ಮತಗಳನ್ನು ಬಚ್ಚಿಡುವ ಚಟವು ಅಂಟಿಕೊಂಡಂತೆ ವ್ಯಕ್ತಿಯಲ್ಲಿ ಸ್ವಂತದ ದೃಷ್ಟಿ ವೈಶಿಷ್ಟ್ಯವು ಬೇಗನೆ ಲುಪ್ತವಾಗುವುದು. ಒರತೆಯ ನೀರನ್ನು ಬಳಸದೆ ಇದ್ದರೆ ಅದರ ಸೆಲೆ (ಊಟೆ)ಯು ದಿಕ್ಕು ಬದಲಿಸುವುದು; ಬಾವಿ ಬತ್ತು ವುದು. ಗವಲ-ಎತ್ತಿನಂತೆ ಎಂದುದಕ್ಕೆ ತಲೆ ಅಲ್ಲಾಡಿಸುವ ಸ್ವಭಾವವು ಮೈಗೂಡಿತೆಂದರೆ ಆ ಬೆಳಕಿನ ಬಂಜೆತನದ ಬಾಳಿನಲ್ಲಿ ಆಶಂಕೆಗಳ ಬಾಧೆ ಯಿಲ್ಲ. ಸ್ವತಂತ್ರ ವಿಚಾರದ ಜನನದ ಬೇನೆತಿನ್ನುವ ಸಂಕಷ್ಟಗಳಿಲ್ಲ.

'ಹೌದು ಸಾರ್;' 'ಆಗಲಿ ಸಾರ್;' 'ಮಹಾಪ್ರಸಾದ;' 'ಮಹಾಸ್ವಾಮಿ ದಿವ್ಯಚಿತ್ತ;' 'ಜೀ ಹಾಂ;' 'ಹಾಂ ಜೀ;' ಎಂದು ಮೃದುಮಧುರ ದೀನ ಸ್ವರದಿಂದ ಉಸಿರಲಿಕ್ಕೆ ಅಥವಾ ಯಾವುದಾದರೊಂದು ಸಂಘದ ಇಲ್ಲವೆ ವ್ಯಕ್ತಿಯ ವಿಶೇಷ ನಾಮೋಚ್ಚಾರಮಾಡಿ 'ಜೈ ಝ್ಯ' ಎಂದು ಘ ಗರ್ಜಿಸ ಲಿಕ್ಕೆ ಕಲಿತರಾಯಿತು. ಜೀವನದಲ್ಲಿ ಮಧ್ಯಾಹ್ನ ಚಿಂತೆ ದೂರವಾಗುವುದು. ಪ್ರಾಮಾಣಿಕ ಕೆಲಸಗಾರ, ನೆವಿಷ್ಟ ನಿಷ್ಠೆಯಿಂದ ನೆಳಲಿನಂತೆ ಹಿಂಬಾಲಿ ಸುವವ, ಪಂಥಾಭಿಮಾನಿ, ಆಚಾರಶೀಲ, ಸಭ್ಯ ........ಎಂದು ಮೊದಲಾದ ವಿಶೇಷಣಗಳೂ ಹೊಗಳಿಕೆಗಳೂ ದೊರೆತು ಇವರ ಬಾಳಿನೊಳಗಿನ ಸಪ್ಪೆ ತನವು ಅದೆಷ್ಟೋ ಕಡಿಮೆಯಾಗುವುದು. ತನ್ನ ವಿಶಿಷ್ಟದಾರಿಯ ಹೊರತು ಇನ್ನೊಂದು ಕಡೆಗೆ ಮನಸು ಸೆಳೆಯಲ್ಪಡಬಾರದೆಂಬುದಕ್ಕೆ ಒಂದು ಹಂಚಿಕೆ ಯಿದೆ: ತಮ್ಮ ಗುಣಾವಗುಣಗಳಿಗಿಂತ ಇನ್ನೊಬ್ಬರ ಕುಂದುಗಳನ್ನು ಯಾವಾಗಲೂ ನೆನೆಯಬೇಕು. ಮತ್ತು ಜಗತ್ತಿನಲ್ಲಿ ಇನ್ನುಳಿದ ಪಂಥ ಅಥವಾ ಮಹಾವ್ಯಕ್ತಿಗಳಿಗಿಂತಲೂ ತಾನು ಅನುಸರಿಸುತ್ತಿರುವುದೇ ಒಂದು ಅಗಾಧ ಮಹಿಮೆಯುಳ್ಳ ಪರಮಕಲ್ಯಾಣಕಾರಿಯೆಂಬ ಹೆಮ್ಮೆಯನ್ನು ವಿಪರೀತವಾಗಿ ಹೆಚ್ಚಿಸಿಕೊಂಡಷ್ಟು ಬುದ್ಧಿಯು ಸ್ತಿಮಿತಕ್ಕೆ ಬರುತದೆ ಮುಗ್ಧಭಾವವು ಬೆಳೆದು ಭಕ್ತಿಯು ದೃಢವಾಗುವುದು. ಯಾರಾದರೂ ತಮ್ಮ ವಿಚಾರಕ್ಕೆ ಅಲ್ಲಸಲ್ಲವೆಂದರೆ ಪಿತ್ತಪ್ರಕೋಪವಾಗಿ, ಶಾಂತವಿಚಾರ ವಿನಿಮಯದಲ್ಲಿ ಇನ್ನೊಬ್ಬರ ಹೆಚ್ಚಿನ ವಿಚಾರಸರಣಿಗೆ ಬಲಿಬೀಳುವ ಮೋಹದ ಪ್ರಸಂಗವೇ ಪ್ರಾಪ್ತವಾಗುವುದಿಲ್ಲ. ಜೀವದ ಅಶಕ್ತ ಪರಿಸ್ಥಿತಿ ಯಲ್ಲಿ ಅಸಂತೋಷದ ಅಗ್ನಿಯಿಂದ ಸತ್ವವು ಪುಟಗೊಳ್ಳುವ ಬದಲು ಸುಟ್ಟು ಹೋಗುವ ಭೀತಿಯೆ ಇದ್ದಾಗ, ಅಂತಹ ಗಂಡಾಂತರದೊಳಗಿಂದ ಪಾರಾಗಲು ಸಿದ್ಧೌಷಧಿಯಿದು. ವ್ಯಕ್ತಿಗಳೂ ಪಕ್ಷಪಂಥಗಳೂ ಎಂತೂ ಬದುಕಿಕೊಂಡಿರುವುದಕ್ಕಾಗಿ ಈ ಉಪಾಯವನ್ನು ಧಾರಳವಾಗಿ ಉಪಯೋಗಿ ಸುವುದುಂಟು.

ಅನಿವಾರ್ಯವಾದ ಪರಿಸ್ಥಿತಿಯಲ್ಲಿ ಜೀವವು 'ಎಂದುದನೆ ಎಂದು ಬಾಳುವ' ಈ ವೇಷ ತಾಳಬೇಕಾಗಿ ಬಂದಿದ್ದರೂ ಎಂತಹ ಅವಸ್ಥೆಯಲ್ಲಿಯೂ ತನ್ನತನವನ್ನು ವ್ಯಕ್ತಪಡಿಸುವುದು ಅದರ ಹುಟ್ಟುಗುಣವಾಗಿದೆ ಕಾಯಕದ

ಸ್ಥೂಲ ಸ್ವರೂಪವು ಒಂದೇ ಮಾದರಿಯೆನಿಸಿದರೂ ಅದರಲ್ಲಿ ವೈಯಕ್ತಿಕವಾದ ಹಲವು ಸೂಕ್ಷ್ಮ ಪ್ರಕಾರಗಳು ಗೋಚರವಾಗದೆ ಇರುವುದಿಲ್ಲ.

ವ್ಯಕ್ತಿತ್ವವು ಜೀವಂತತನದ ಲಕ್ಷಣವೆಂದು ಅಂತ ಹಲವರು ತಾವು ಜೀವಂತವಾಗಿದ್ದೇವೆಂಬುದನ್ನು ಸ್ಥಾಪಿಸಲಿಕ್ಕೆ ಏನಾದರೊಂದು ತಮ್ಮ ವೈಶಿಷ್ಟ್ಯವನ್ನು ಪ್ರದರ್ಶಿಸಲು ಸದಾ ಸರ್ವಕಾಲ ಹಾರಾಟ-ಹೋರಾಟ ನಡೆಸುತ್ತಾರೆ. ಸಮಾಜದ ಚಿತ್ತವನ್ನು ತಮ್ಮತ್ತ ಸೆಳೆದುಕೊಳ್ಳಲು ಇಂತಹರು ಯೋಜಿಸುವ ಎಷ್ಟೋ ಹಂಚಿಕೆಗಳು ಕುತೂಹಲಜನಕವಾಗಿರುತ್ತವೆ. ವೈಚಿತ್ರ್ಯ ವಿಕ್ಷಿಪ್ತರೀತಿ ಕೃತಿಗಳಿಂದ ಜನರ ಮನದಲ್ಲಿ ತಮಗೊಂದು ಸ್ಥಾನವನ್ನು ಕಲ್ಪಿಸಿಕೊಳ್ಳಬಯಸುವ ಜೀವದ ಹವಣಿಕೆಯಿದು. 'ಮುರಾರೇಃ ತೃತೀಯಃ ಪಂಥಃ' ಎಂಬ ಲೋಕೋಕ್ತಿಯು ಇಂತಹರಿಗೆ ಸರಿಹೋಗುತ್ತದೆ. ಸಮಾಜದಲ್ಲಿ ಇದು ಅನಿವಾರ್ಯ 'ಊರಿನದು ಒಂದಾದರೆ ಊಡುಕನದೇ ಒಂದು;' ಎಂದು ಪರಿಹಾಸಮಾಡಿದಲ್ಲಿ ಸ್ವತಂತ್ರ ಕೃತಿಗಳಿಗೆ ಕೇರುಹಾಕಿದಂತಾಗಿ ಗತಾನುಗತಿಕತ್ವಕ್ಕೇ ಗೌರವಕೊಟ್ಟಂತಾಗುವುದು. ನಾಡಿನ ಮುನ್ನಡೆಗೆ ತಡೆಯನ್ನೊಡ್ಡಿದಂತಾಗುವ ಸಂಭವವಿದೆ. ಆರಂಭದಲ್ಲಿ ತೃತೀಯಃ ಪಂಥವೆನಿಸಿಕೊಳ್ಳದ ಸ್ವತಂತ್ರ ವಿಚಾರವಿಲ್ಲ ಹೊಸಪಕ್ಷವಿಲ್ಲ-ಶಂಕರ, ಮಧ್ವ, ಅಲ್ಲಮಾದಿಗಳೂ ಆಯಾ ಕಾಲದ ತೃತೀಯ ಪಂಥಿಗಳೇ. ಆದರೆ ತೃತೀಯಃ ಪಂಥಗಳೆಲ್ಲವೂ ವಿಚಾರವಂತರ ಸುವಿಚಾರದ ಮಾರ್ಗಗಳೇ ಎಂದು ಸಾಧಿಸುವುದೂ ಏಕಪಕ್ಷೀಯ ವಿಚಾರವಾದೀತು; ಉಭಯ ದೃಷ್ಟಿಯ ತೂಕದ ಮಾತಾಗದು. ಕೇವಲ ನಾವೀನ್ಯಕ್ಕಾಗಿ ನವೀನತೆಯನ್ನಾಶ್ರಯಿಸುವುದು ಹಿತಕರವಲ್ಲ; ಕ್ಷೇಮಕರವೂ ಅಲ್ಲ; ಪ್ರಾಮಾಣಿಕ ಮತಭೇದಕ್ಕಾಗಿ, ತಾನುಕಂಡ ಸತ್ಯದ ಇನ್ನೊಂದು ಅಂಶವನ್ನು ಲೋಕನಿದರ್ಶನಕ್ಕೆ ತಂದುಕೊಡುವುದಕ್ಕಾಗಿ, ಸೌಂದರ್ಯದ ಇನ್ನೊಂದು ಅಂದವನ್ನು ಎಂದರೆ ಬಗೆಯನ್ನು ರೂಢಿಸಿ ಜೀವನದ ಸೊಗಸನ್ನು ಹೆಚ್ಚಿಸುವುದಕ್ಕಾಗಿ ಅಥವಾ ಕುರೂಪತೆ ಇಲ್ಲವೆ ಅನ್ಯಾಯಗಳನ್ನು ಸಹಿಸದೆ, ಇಂತಹ ಯಾವುದೇ ಕಾರಣಕ್ಕಾಗಿ ತೃತೀಯಃ ಪಥವನ್ನು ಆರಂಭಿಸಿದ ವ್ಯಕ್ತಿಯು-ಯಶಸ್ವಿಯಾಗಲಿ, ಆಗದಿರಲಿ, ಸಮಾಜದಿಂದ ಮನ್ನಣೆ ದೊರೆಯಲಿ,

ದೊರೆಯದಿರಲಿ ಅದು—ಅಭಿನಂದನಾರ್ಹವಾಗಿದೆ. ಆದರೆ ಕೇವಲ ಈರ್ಷೆ. ಅಸೂಯೆಗಳಿಂದ, ಸ್ವಾರ್ಥ ಸ್ಪರ್ಧೆಗಳಿಂದ, ತನಗೆ ಸ್ಥಾನ-ಮಾನ ಗಳು ದೊರೆಯದ್ದಕ್ಕೆ, ಖ್ಯಾತಿ ಕಾಮುಕತೆಯಿಂದ, ಅಹಂಕಾರದ ಆವೇಗ ಉದ್ವೇಗದಿಂದ ಪ್ರಚೋದಿತವಾದ ತೃತೀಯಃ ಪಂಥಿಯು ಸಮಾಜದ ಗಗನಾಂಗಣದಲ್ಲಿ ಮೂಡಿದ ಬಾಲಚುಕ್ಕೆ. ಸಮಾಜದಲ್ಲಿ ಆಗಾಮಿ ಅಶಾಂತಿಯ ಪೂರ್ವ ಸೂಚನೆ.

ಹೊಸ ಹಾದಿಯ ವ್ಯಕ್ತಿಗೆ, ತೃತೀಯಃ ಪಂಥಿಯೆಂದು ಒಮ್ಮೆಲೆ ತಲೆ ಕುಕ್ಕುವುದು ಅನುಚಿತ. ಸತ್ಯವು ಅನಂತ ಸ್ವರೂಪ. ಇದ್ದುದಕ್ಕೆ ಅಂಟಿ ಕೊಂಡಿದ್ದರೆ ಅನಂತತ್ವದ ಅರಿವು ಕೂಡ ಹಾರಿಹೋಗುವುದು. ಬಗೆಬಗೆಯ ಹೊಸ ಹೊಸ ಪ್ರಯೋಗಗಳು ನಡೆಯುತ್ತಿದ್ದಾಗಲೇ ಸತ್ಯಾಸತ್ಯದ ನಿರ್ಣಯವಾಗಿ ಪ್ರಗತಿಯ ದಾರಿಯು ದೊರೆಯುವ ಆಶೆ. ಆದುದರಿಂದ ಹೊಸಬಗೆಯ ಪ್ರಯತ್ನಗಳನ್ನು ತಿರಸ್ಕರಿಸುವ, ಬಹಿಷ್ಕರಿಸುವ ಸಮಾಜವು ತನ್ನ ಏಳ್ಗೆಯನ್ನು ತಾನೇ ನಿಲ್ಲಿಸಿಕೊಳ್ಳುತ್ತದೆ. ಇದು ಅಕೃತ್ಯ, ಕೊನರುವ ಕುಡಿಯನ್ನೇ ಚಿವುಟಿದಂತೆ. ಆತ್ಮಘಾತಕ, ಸಮಾಜದ ವಿಕಸನಶಕ್ತಿ ಯನ್ನೇ ನಷ್ಟಪಡಿಸಿದಂತೆ. ತೃತೀಯಃ ಪಂಥಿಗಳು ಮುಂದೆ ಬರಲಿ. ಆದರೆ ತಮ್ಮ ನಾವೀನ್ಯಪೂರ್ಣ ಕೃತಿಯು ಸಮಾಜದ ಧಾರಣೆ, ಪೋಷಣೆ, ಅಥವಾ ಉತ್ಕರ್ಷಕ್ಕೆ ಹೇಗೆ ಸಹಾಯವಾಗಬಲ್ಲದೆಂಬು ದನ್ನು ನಡೆವಳಿಯಿಂದ ಮನಗಾಣಿಸಿ ಕೊಡಲಿ. ಟೀಕೆಗಳು ಬೇಡ ವೆಂಬುದು ತಮ್ಮ ಪಕ್ಷದ ಅಂತರ್ಗತ ಅಶಕ್ತತೆಯ ಸೂಚಕ. ಯಾರ ವಿರೋಧವೇ ಇಲ್ಲದೆ ಜಯಶೀಲರಾದವರ (?) ಯೋಗ್ಯತೆಯು ಸಂದೇ ಹಾಸ್ಪದವಾದುದು. ವಿರೋಧವು ಎಷ್ಟು ಬಲಿಷ್ಟವೊ ಅಷ್ಟು ಆ ಗೆಲುವಿನ ಮೆರಗು ಹೆಚ್ಚು.

ಇನ್ನೊಂದು ದೃಷ್ಟಿಯಿಂದ ವಿಚಾರಿಸಿದರೆ ಯಾರು ತೃತೀಯಃ ಪಂಥಿಗಳಲ್ಲ ? ಎಷ್ಟು ವ್ಯಕ್ತಿಗಳೊ ಅಷ್ಟು ಪ್ರಕೃತಿಗಳು. ಒಬ್ಬೊಬ್ಬರ ಸ್ವಭಾವ ಒಂದೊಂದು. ಇದು ವ್ಯಕ್ತಿಯ ಅವಿಭಾಜ್ಯ, ಅವಿಚ್ಛಿನ್ನ ಅಂಶ. ವ್ಯಕ್ತಿಯ ತಿರುಳು. ಅದುವೆ ಪುರುಳು (ಹುರುಳು); ಎಂದರೆ ಸಂಪತ್ತು.

'ಅರ್ಥ.' ಸ್ವಂತದ ಅರ್ಥವಿಲ್ಲದ್ದು—ಸ್ವ-ಅರ್ಥವಿಹೀನವಾದು. ಬರಿದೋ ಬರಿದು ಬಂಜೆ ಜುಳ್ಳು ಬಂದ ಗಾಳಿಗೆ ಹಾರಿಹೋಗುವಷ್ಟು ಹಗುರು ಬಡವಿಲ್ಲದ ಪ್ರಾಣಿ.

'ನಾನು' ಎಂಬ ಅರಿವು ಮಾನವರಿಗೆ ಹುಟ್ಟಿದೊಡನೆಯೆ ಬಂದಿರುತ್ತದೆ. ಈ ಅರಿವು ಇಲ್ಲದ ನಾನು ಏನು ? ಅಂತಹ 'ನಾನು' ಇದ್ದದ್ದೂ ಇಲ್ಲದ್ದೂ ಒಂದೇ. ಆದಕಾರಣ ಅರಿವು (ಚಿತ್) ನಾನು;—ನಾನೇ ಅರಿವು, ಎಂದರೂ ತಪ್ಪಲ್ಲ. ಲೋಕದಲ್ಲಿ ಇದರ ಬೆಲೆ ಯಾತಕ್ಕೆ ಬಂದೀತು ? ಇದು ಏನು ಕೊಟ್ಟರೆ ದೊರೆತೀತು ? ಜೀವನದ ಜೀವನವಿದು. ಇದರಿಂದಲೇ ಉಳಿದೆಲ್ಲ ವಸ್ತುಜಾತಗಳಿಗೆ ಬೆಲೆ. ಇದಿಲ್ಲದ ಬಾಳು ಶೂನ್ಯ. ಆದುದರಿಂದಲೆ 'ತೊರೆದು ಜೀವಿಸಬಹುದೆ ನಿನ್ನ' ಎಂದು ಕನಕದಾಸರು ನುಡಿದುದು (ಪರಮ ಅರ್ಥದಲ್ಲಿ ಅಲ್ಲವಾದರೂ) ಸಾಮಾನ್ಯಾರ್ಥದಲ್ಲಿ ಸಂಪೂರ್ಣ ಸತ್ಯವಾಗಿದೆ 'ನಾನು' ಎಂಬ ಅರಿವನ್ನು ಉಳಿಸಿಕೊಂಡಲ್ಲದೆ ಬಾಳು ಹಾಳು. 'ಸ್ವ'ದ ಅರ್ಥವೇನೆಂದು ತಿಳಿಯದಿದ್ದರೂ ಸ್ವಾರ್ಥವಿಲ್ಲದ ಪ್ರಾಣಿಯಿಲ್ಲ. 'ನಾನು' ಎಂಬ ಅರಿವು ವ್ಯಕ್ತಿಯ ವೈಶಿಷ್ಟ್ಯಕ್ಕೆ ಕಾರಣವಾಗುತ್ತದೆ. ವ್ಯಕ್ತಿಯ ವೈಶಿಷ್ಟ್ಯವು ಅದರ ಅರ್ಥ. ಅಥವಾ 'ಈ ಅರ್ಥವು ತನ್ನದು' ಎಂದು ನಿರ್ಧರಿಸಿ ವ್ಯಕ್ತಿಯು ತನಗೆ ವೈಶಿಷ್ಟ್ಯವನ್ನು ತಂದು ಕೊಂಡಿರುತ್ತದೆ. ಈ ಅರ್ಥವೇ ಸ್ವಾರ್ಥವೂ ಅಹುದು.

ಕೇವಲ ತಮ್ಮ ತಮ್ಮ ವೈಶಿಷ್ಟ್ಯಗಳನ್ನೇ ನೆನೆದುಕೊಳ್ಳುತ್ತಲಿರುವ ವ್ಯಕ್ತಿಗಳು ಸ್ವಾರ್ಥಿಗಳು ಇಂತಹ ಶಿಷ್ಟರೂ ವಿಶಿಷ್ಟರೂ ಬಹುಸಂಖ್ಯಾಕರಾಗಿರುವ– ಮೇಲ್ಪಂಕ್ತಿಯಾಗಿರುವ ಸಮಾಜವು ಅತ್ಯಂತ ವಿಸ್ಖಲಿತವಾಗಿರುತ್ತದೆ. ತಮ್ಮ ತಮ್ಮ ಪ್ರತಿಷ್ಠೆ, ವೈಶಿಷ್ಟ್ಯಗಳೇ ಪ್ರಾಮುಖ್ಯವಾಗಿರುವ ವ್ಯಕ್ತಿಗಳೂ ಗುಂಪುಗಳೂ ಸಂಘ-ಸಂಸ್ಥೆಗಳೂ ಇರುವ ನಾಡು, ಪರರ ಆಕ್ರಮಣವಾಗದೆ ಇರುವ ವರೆಗೇ ಸ್ವತಂತ್ರ ತಮ್ಮ ತಮ್ಮ ಗೌರವವನ್ನು ಹೆಚ್ಚಿಸಿಕೊಳ್ಳಲು ಇವರು ಯಾವುದಕ್ಕೂ ಸಿದ್ಧರು. ಒಳಗಿನ ಅರ್ಥಕ್ಕೆ ಬೆಲೆಕೊಡದೆ ಹೊರಗಿನ ಅರ್ಥಕ್ಕೆ ಮರುಳಾಗಿ ಅದರ ಬೆಂಬತ್ತುವುದರಿಂದ, ತಪ್ಪು ಅರ್ಥವನ್ನು ಅನುಸರಿಸುವುದರಿಂದ ಇದೆಲ್ಲ ಅನರ್ಥ !

ತನ್ನತನದ ಅರಿವು ಸ್ವಾರ್ಥಕ್ಕೆ ಒಯ್ಯುತ್ತದೆ. ಆದಕಾರಣ ಸ್ವಾರ್ಥ, ವಂಚನೆ ಮೊದಲಾದವುಗಳಿಗೆಲ್ಲ ಮೂಲ ಕಾರಣವಾದ ಅರಿವು ಮತ್ತು ಬುದ್ಧಿಯನ್ನೇ ನಷ್ಟಪಡಿಸಬೇಕೆಂದು ಉಪದೇಶಿಸುವ ತತ್ವಜ್ಞಾನವೊಂದಿದೆ; ಬಯ್ಯುವುದೆಂದು ನಾಲಗೆ ಕೊಯ್ದುಕೊಂಬುದು! ಚಾಡಕೇಳುವುದೆಂದು ಕಿವಿಯು ಕಾಯ್ದೆಣ್ಣೆ ಹಾಕಿಕೊಂಬುವದು! ಹೆಣ್ಣು ಚೆಲುವಿಗೆ ಆಸೆ ಪಡುವುದೆಂದು ಕಣ್ಣು ಕಳೆದುಕೊಂಬುದು! ಬೆಂಕೆಯು ಮೈ ಕೈ ಸುಡುವುದು, ಮನೆ ಸುಡುವುದೆಂದು ಬೆಂಕೆಯೇ ಇರಕೂಡದೆಂಬುದು! ಇದೇನು ವಿವೇಕವೇ? ಅಯೋಗ್ಯರ ಅವಿವೇಕದ ಕೃತ್ಯ. ವಿವೇಕದಿಂದ ಯೋಗ್ಯ ರೀತಿಯಲ್ಲಿ ಉಪಯೋಗಿಸಿಕೊಂಡರೆ ಬೆಂಕಿಯು ಅಮೃತಸದೃಶ ಪಕ್ವಾನ್ನಗಳನ್ನು ಸಿದ್ಧಪಡಿಸುವುದು. ಲೋಕಕ್ಕೆ ಬೆಳಕು ಕೊಡುವುದು. ಅರಿವು, ಬುದ್ಧಿಗಳ ರೀತಿಯೂ ಹೀಗೆಯೆ ಇದೆ. ಅರಿವಿನಿಂದಲೆ ಮನುಷ್ಯತ್ವ ಪಶುವಿನಿಂದ ಭಿನ್ನತ್ವ. ಆ ಅರಿವು ಕಳೆದುಕೊಳ್ಳುವುದೇ?

ತಾನು ಇದ್ದೇನೆ; ಎಂಬ ಅರಿವು ಇಲ್ಲದರ ಬಾಳಿನಲ್ಲಿ ಜೀವನಾನಂದವನ್ನು (ಅರಿವಿನೊಡಗೂಡಿ) ಅನುಭವಿಸುವ ಶಕ್ತಿಯು ಮಂದವಾಗುತ್ತದೆ. (ಭಾವಾವೇಶದ, ಭಾವನಿರ್ಭರದ) ನೆನಹಿನಲ್ಲಿ ಇರುವ ಆನಂದದ ಸೊಗಸು, ಪ್ರತ್ಯಕ್ಷ ಆ ಘಟನೆಯ ಕಾಲದಲ್ಲಿ ಇರುವುದಿಲ್ಲ. ಕಾವ್ಯ, ನಾಟಕ, ಕಥೆ ಕಾದಂಬರಿ, ನಾಟ್ಯ, ಚಿತ್ರ, ಮೂರ್ತಿಗಳನ್ನು ಕಾಣುವಾಗ ಆಗುವ ರಸ-ಸ್ಪರ್ಶದ ಆನಂದಾನುಭವವು ಪ್ರತ್ಯಕ್ಷ ಸಾಂಸಾರಿಕ ಪ್ರಸಂಗದಲ್ಲಿ ಬಾರದು. ಸಾಂಸಾರಿಕ ಘಟನೆಗಳ ಆಗುಹೋಗಿನ ಕಾಲದ ಕದಡಿದ ಮನಸಿನ ಹೊಯ್ದಾಟದಲ್ಲಿ ಅರಿವು ತಳಕ್ಕೆ ಉಳಿಯುವುದು. ಒದಗುತ್ತಿರುವುದರ ಮೇಲೆ ಅರಿವಿನ ನಿಯಂತ್ರಣವು ಇಲ್ಲದಾಗುವುದು. ಈ ನಿರ್ವಿಣ್ಣ ಸ್ಥಿತಿಯಲ್ಲಿ ಅರಿವು ಮರವಟ್ಟು, ಜ್ಞಾನಸಂವೇದನಾಶಕ್ತಿಯು ಬಧಿರವಾಗುವುದು. ಈ ಅವಸ್ಥೆಯಲ್ಲಿ ಪಶುವಿಗೂ ಮನುಷ್ಯನಿಗೂ ವಿಶೇಷ ಅಭ್ಯಂತರವು ಉಳಿಯುವುದಿಲ್ಲ. ಒದಗಿದ್ದಕ್ಕೆ ಸಾಕ್ಷಿಯೆ ಇಲ್ಲದ ಘಟನೆ ಆಯಿತೆಂಬುದು ಸಂಶಯಾಸ್ಪದವಾಗುತ್ತದೆ. ಕಲಾ-ಸಾಹಿತ್ಯದ ಘಟನೆಗಳ ರಸಾನುಭೂತಿಗೆ ಹಿನ್ನೆಲೆಯಲ್ಲಿ ಜಾಗೃತ ಸಾಕ್ಷಿಯು ಇರುವುದರಿಂದ ಇದರ ಆನಂದದ

(ದುಃಖ ವಿಸ್ಮಯಾದಿಗಳ) ಸೊಗಸಿನಲ್ಲಿ ಒಂದು ವಿಶೇಷವಿದೆ. ಸಂಪ್ರಜ್ಞಾತ ಸಮಾಧಿ ಸೌಖ್ಯದ ಅಪೂರ್ವವಾದ ಆನಂದವು ಸೋಂಕುವುದೆಂದೇ ಸಾಹಿತ್ಯ ಕಲೆಗಳಲ್ಲಿ ಲೋಕಕ್ಕೆ ಇಷ್ಟೊಂದು ಹುಚ್ಚು ಆಸಕ್ತಿ. ಸಾಹಿತ್ಯ ಕಲಾ-ಕೃತಿಗಳು ರಸನಿಮಿಷದ ಸ್ಮಾರಕ; ಅರಿವಿನ ಗುರಿನೆ ಇದು. ನೆನಹಿನಲ್ಲಿ ಅರಿವಿನಲ್ಲಿ ಇರುವ ಈ ಅಪೂರ್ವ ಸಾಮರ್ಥ್ಯವನ್ನು ಬಳಸಿಕೊಂಡು ತಿಳುವಳಿಕೆ ಬಂದ ಮೇಲಾದರೂ ಇಡೀ ಜೀವನವು ಆನಂದದ ಕಲಾಕೃತಿಯಾಗುವಂತೆ ಮಾನವನು ಏಕೆ ಪ್ರಯತ್ನಪಡುತ್ತಿರಲಿಕ್ಕಿಲ್ಲ? ಈ ದಾರಿಯಲ್ಲಿರುವ ತಡೆಗಳೇನು?

ಮಾನವನಿಗೆ ಇನ್ನುಳಿದವರೊಡನೆ ಸುತ್ತಲಿನ ವ್ಯಕ್ತಿ-ವಸ್ತುಗಳೊಡನೆ ಬರುವ ಸಂಬಂಧ-ಸಂಪರ್ಕ, ಆಡಿದಾಟ-ತಿಕ್ಕಾಟದಲ್ಲಿ ಅರಿವು ಪುಟಗೊಳ್ಳುವುದು; ದೃಢವಾಗುವುದು. ಸಮಾಜದೊಡನೆ ಬರುವ ಸಂಬಂಧವು ಎಷ್ಟು ವಿಶಾಲವೊ ಅಷ್ಟು ವ್ಯಕ್ತಿಯ ತಿಳುವಳಿಕೆಯು ಬೆಳೆಯಲು ದೊಡ್ಡ ಕ್ಷೇತ್ರವು ದೊರೆಯುವುದು. ಎಷ್ಟೇ ಚುರುಕುಬುದ್ಧಿ ವಿಶೇಷ ಪ್ರತಿಭೆಯಿದ್ದರೂ ವ್ಯಕ್ತಿಯು ಹೊರಗೆ ವಿಶಾಲ ಕ್ಷೇತ್ರದಲ್ಲಿ ಪ್ರವೇಶಿಸಲಿಲ್ಲವಾದರೆ ಅದರ ವಿಕಾಸವಾಗದೆ ಬೆಳೆಯುಳ್ಳದಾದರೂ ಬೀಳುಭೂಮಿಯಂತೆ ಅದರ ಹಾಳು ಆಗುವುದು. ಸಂಧಿಯನ್ನು ದೊರಕಿಸಿಕೊಂಡು ಮುಂದುವರಿದ ಸಾಮಾನ್ಯನೂ ಮನೆಯಲ್ಲಿ (ತನ್ನ ಊರು ಅಥವಾ ಸಂಕುಚಿತ ಕ್ಷೇತ್ರದಲ್ಲಿ) ಉಳಿದ ಅಸಾಮಾನ್ಯನಿಗಿಂತ ಹೆಚ್ಚು ಬೆಳವಣಿಗೆಯನ್ನು ಹೊಂದುವನು. ಸಮಾಜದೊಡನೆ ಬರುವ ಸಂಬಂಧದಲ್ಲಿಯೇ ಮಾನವರ ಅರಿವು ಹಿಗ್ಗುಗೊಳ್ಳುತ್ತದೆ. ಶತಮಾನ ಶತಮಾನಗಳಿಂದ ಅವ್ಯಾಹತವಾಗಿ ಸಂಗ್ರಹಿಸಿದ ಜ್ಞಾನದ ನಿಕ್ಷೇಪವನ್ನು ಸಮಾಜವು ವ್ಯಕ್ತಿಯ ಕೈಗೆ ಒಪ್ಪಿಸುತ್ತದೆ. ರೂಢಿ-ಸಂಪ್ರದಾಯಗಳು, ಜಾನಪದಗೀತ-ಕಥೆ-ಗಾದೆಗಳು, ಕಲಾ-ಸಾಹಿತ್ಯ-ಶಾಸ್ತ್ರಗ್ರಂಥಗಳು ಮೊದಲಾದವುಗಳ ರೂಪದಲ್ಲಿ ಸಮಾಜದ ಅನಂತಕಾಲದ ಜ್ಞಾನನಿಧಿಯು ಪೀಳಿಗೆಯಿಂದ ಪೀಳಿಗೆಗೆ ಸಾಗಿಬರುತ್ತದೆ. ಇದರಲ್ಲಿ ಎಲ್ಲವೂ ಅವಮೌಲಿಕವೆಂದು ಬಗೆಯುವುದು ಹೇಗೆ ಅಯುಕ್ತವೊ ಹಾಗೆ ಎಲ್ಲವೂ ನಿರುಪಯುಕ್ತವೆಂಬುದು ಅಸಮಂಜಸ. ಹಿಂದಿನಿಂದ ಬಂದುದನ್ನು ಸ್ವೀಕರಿಸಿ, ಪರೀಕ್ಷಿಸಿ, ಬಳಕ ಪರಿಷ್ಕಾರಗೊಳಿಸಿ, ಮುಂದೆ

ರಿತ್ತಿ ಅದಕ್ಕೆ ಯಥಾಶಕ್ತಿ ತನ್ನ ಕಾಣಿಕೆಯನ್ನು ಕೂಡಿಸಿ, ಮುಂದಣ ರ
ೀಗೆ ಒಪ್ಪಿಸಲ್ಪಡಬೇಕು. ಮಾನವನಿಗೆ ತನ್ನ ವ್ಯಕ್ತಿತ್ವವನ್ನು ಪಡೆದು
ೊಳ್ಳಲು ಸಮಾಜವು ಇಂತು ಮುದಲನ್ನು (ಬಂಡವಾಳ) ಒದಗಿಸುತ್ತದೆ.

ಸಮಾಜದಿಂದ ಈ ನೆರವನ್ನು ಪಡೆಯದ ಮಾನವನು ಪ್ರಾಥಮಿಕ ಅವಸ್ಥೆಯಲ್ಲಿಯೆ ಉಳಿಯುವನು ಸಮಾಜದಿಂದ ಸಂಸ್ಕಾರ ಹೊಂದದ ಬುದ್ಧಿ, ಸ್ಫೂರ್ತಿ, ಪ್ರತಿಭೆಗಳೆಲ್ಲ ಎಷ್ಟೇ ಬೆಲೆಯುಳ್ಳವಿದ್ದರೂ ಸಾಣೆ ಹಿಡಿಯದ ವಜ್ರ. ಲೋಕದೊಳಗಿನ ಶ್ರೇಷ್ಠರ ಶ್ರೇಷ್ಠತೆಗೆ, ಮಹಾಮಹಿಮರ ಮಹಿಮೆಗೆ ಸಮಾಜವೇ ಮೂಲಾಧಾರ ಪಶುತ್ವದಿಂದ ಮನುಷ್ಯತ್ವವನ್ನು ಪಡೆಯುತ್ತಿರುವುದು ಸಮಾಜದ ಕೃಪೆಯಿಂದ ಆದಕಾರಣ ಸಮಾಜದ ಋಣವನ್ನು ತೀರಿಸಲು ಶಕ್ಯವಿದ್ದ ಎಲ್ಲ ಬಗೆಗಳಿಂದಲು ನೆರವಾಗುವುದೂ ಪ್ರಯತ್ನಿಸುವುದೂ ವ್ಯಕ್ತಿಯ ಕರ್ತವ್ಯವಾಗಿದೆ ಹುಟ್ಟಿದೊಡನೆ ಓಡಿಹೋಗಿ ಯಾರ ಸಂಪರ್ಕವೂ ಇರದೆ ಅಡವಿಯಲ್ಲಿಯೆ ಬೆಳೆದಿದ್ದರೆ, ಶಂಕರನು ಶಂಕರಾಚಾರ್ಯನಾಗುವುದು ಅಂತಿರಲಿ, ಶಂಕರನೆಂಬುವನು ಇದ್ದ ಸುದ್ದಿಯೂ ಪ್ರಪಂಚಕ್ಕೆ ತಿಳಿಯುತ್ತಿದ್ದಿಲ್ಲ ಶಂಕರ-ಮಧ್ವ-ಬಸವ-ಪುರಂದರಾದಿ ವಿಭೂತಿಗಳು ಕೂಡ ಸಮಾಜದ ಹಂಗಿಗರು. ಸಮಾಜದಿಂದ ಉಪಕಾರ ಹೊಂದಿದವರು ಸಮಾಜಕ್ಕೆ ಚಿರಋಣಿಗಳು. ಯಾರಿಂದ ಉಪಕಾರವಾಗಿವೆಯೊ ಅವರನ್ನು ಕಡೆಗಣಿಸುವುದು, ತಿರಸ್ಕರಿಸುವುದು—ನಡುವೇ ಅವರ ಕೈಬಿಡುವುದು ಕೃತಘ್ನತನವೆನಿಸುವುದು. ಆದುದರಿಂದ ಶಂಕರ-ಮಧ್ವ-ಪುರಂದರಾದಿಗಳು ಯಾರೇ ಆಗಲಿ, ಜನರಿಗೆ ಸಮಾಜದಿಂದ ದೂರ ಸರಿದು ಓಡಿಹೋಗಲು ಎಂದೂ ಉಪದೇಶಿಸಲಾರರು ಕ್ವಚಿತ್ ಪ್ರಸಂಗದಲ್ಲಿ ಅವರ ಹೇಳಿಕೆಯಲ್ಲಿ ಅಂತಹ ಮಾತುಗಳು ಇವೆಯೆಂದು ಎನಿಸಿದರೆ, ಅದರ ಅರ್ಥವು ಬೇರೆ ಎಂದು ಗ್ರಹಿಸಬೇಕು. ಇಲ್ಲವಾದರೆ ಆ ಮಹಾಮಹಿಮರಿಗೆ ಅನ್ಯಾಯ ಮಾಡಿದಂತಾದೀತು. ಒಂದು ವೇಳೆ, 'ಆ ಮಹಾಪುರುಷರು ಸಂಸಾರದಿಂದ ಓಡಿಹೋಗುವುದಕ್ಕೆ ಉಪದೇಶಿಸಿದ್ದೇ ನಿಜ;' ಎಂದು ತಜ್ಞರ ಅಭಿಪ್ರಾಯವಿದ್ದರೆ, 'ಆ ಉಪದೇಶದಲ್ಲಿ ಸ್ವಲ್ಪ ಕೊರತೆಯಿದೆ. ಅಂದಿನವರ ದಾರಿ ಇಂದಿನವರಿಗೆ ಏತಕ್ಕೆ' ? ಎಂದು

ವಿನಯದಿಂದ ನಮಸ್ಕರಿಸಿ, ಅವರಲ್ಲಿ ಉಪಯುಕ್ತವಿದ್ದುದನ್ನು ಸ್ವೀಕರಿಸಿ ಮುನ್ನಡೆಯಬೇಕು. ಹುಟ್ಟಿನಿಂದ ಸಾವವರೆಗೆ ನಾನಾತೆರದ ಉಪಕಾರ ಗಳನ್ನು ಮಾಡಿಸಿದ ಸಮಾಜವನ್ನು ತನ್ನ ಮಕ್ಕಳುಮರಿಗಳಲ್ಲಿ ಮೈಮರೆತು, ಕ್ಷುದ್ರ ಐಹಿಕ ಸ್ವಾರ್ಥದಿಂದ ಅಂಧರಾದವರೂ ಅಥವಾ ಪಾರಲೌಕಿಕ ಆಧ್ಯಾತ್ಮವೃತ್ತಿಯಲ್ಲಿ ಹೊರಗಿನ ಲೋಕವನ್ನು ಮರೆತು ಅದನ್ನು ಕಡೆಗಣಿಸು ವವರೂ ಇಬ್ಬರೂ ಸಾಮಾಜಿಕ ದೃಷ್ಟಿಯಿಂದ ಮಹಾಪರಾಧಿಗಳೇ. ಈ ಪಾತಕಕ್ಕೆ ಪ್ರಾಯಶ್ಚಿತ್ತವಿಲ್ಲ. ಇಂತಹ ವ್ಯಕ್ತಿಗಳಿಗೆ ಉತ್ತೇಜನವಿರುವ ವಾತಾವರಣವುಳ್ಳ ಸಮಾಜಕ್ಕ ಅವನತ ಸ್ಥಿತಿಯೆ ಗತಿ.

ಸಮಾಜ ಇಲ್ಲವಾದರೆ ಆತ್ಮೋದ್ಧಾರ, ಆತ್ಮವಿಕಾಸಾದಿ ಮಾತುಗಳಿಗೆ ಏನು ಅರ್ಥ ? ಪಶುತ್ವದಿಂದ ಮೇಲೆತ್ತಿ ಮಾನವನಿಗೆ ಮಾನವತ್ವವನ್ನು ಕೊಡುವುವೆಂದು ಹೇಳುವ ನಾಗರಿಕತೆ, ಸಂಸ್ಕೃತಿಗಳು ಸಮಾಜದ ಆಧಾರ ದಿಂದಲೇ ಉಳಿದುಕೊಂಡು ಹೆಚ್ಚಳವನ್ನು ಹೊಂದುತ್ತಿರುವುವಲ್ಲವೆ ? 'ಜನನಿಯಾ ಕೊಡು ಎಂದು, ಜಗದೀಶ, ಬೇಡುವೆನೆ ? ಜನನಿ ಏನಿತ್ತಳೊ ಪ್ರಲ್ಹಾದಗೆ .......! ತಾಯಿಯಂತಹ ನಿಸ್ವಾರ್ಥ ಪ್ರೇಮದ ಮೂರ್ತಿ ಯನ್ನು ಕುರಿತೇ ಈ ಹಾಡು. ಎಂದ ಬಳಿಕ ತಂದೆ, ಮಕ್ಕಳು, ಗೆಳೆಯರು, ನೆರೆಹೊರೆಯುವರು, ಊರು ಕೇರಿ, ದೇಶ-ಕೋಶಗಳ ಮಾತು ಏತಕ್ಕೆ ? ಇಂತು ಲೋಕದ ಮೋರೆಯೇ ಬೇಡವೆಂದು ಒರಲುವ ಜೀವಾತ್ಮವು ನಿರೋಗಿ ಯೆಂದು ಬಗೆಯಲಿಕ್ಕಾದೀತೆ ? ಹಿಗ್ಗುವುದು ಆರೋಗ್ಯ ಜೀವದ ಲಕ್ಷಣ. ಹಿಗ್ಗುವ ಬದಲು ಕುಗ್ಗುತ್ತಲಿರುವ, ಕೊರಗುತ್ತಲಿರುವ, ಕಿರಚುತ್ತಲಿರುವ ನರಪ್ರಾಣಿಯು ನಾಮಸ್ಮರಣದಲ್ಲಿ ಎಷ್ಟೇ ತೊಡಗಿದ್ದರೂ ಅದರ ಆತ್ಮ ವಿಕಾಸವಾಗಿದೆ, ಅಥವಾ ಆಗುತ್ತಲಿದೆಯೆಂಬುದು ತೀರ ವಿಪರೀತ. ಲೋಕ ಮಧ್ಯದಲ್ಲಿ ನಿಂತು ಅಗ್ನಿ ದಿವ್ಯದೊಳಗಿಂದ ಹಾಯ್ದು, ಸತ್ವಪರೀಕ್ಷೆಯನ್ನು ಮಾಡಿಕೊಳ್ಳಲಿಕ್ಕಾಗದೆ, ಓಡಿಹೋಗಿ ಅಡವಿ, ಆಶ್ರಮ, ಮಠ ಅಥವಾ ಮನೆಯಲ್ಲಿ ಹುದುಗಿಕೊಂಡು ಕುಳಿತು ತಮಗೆ ಆತ್ಮಸಿದ್ಧಿಯಾಗಿದೆಯೆಂದು ಲಂಗೋಟಿ ಸಂಸಾರವನ್ನು ಮರಳಿ ಆರಂಭಿಸುವರು. ತಮ್ಮ ಅತೃಪ್ತ

ಕಾಮನೆಗಳನ್ನು ಮಠದ ಸಂಸಾರಹೂಡಿ ತೃಪ್ತಪಡಿಸಿಕೊಳ್ಳುವರು. ಆಮಿಷ ದಿಂದ ದೂರವಿರುವ ವರೆಗೆ ಎಲ್ಲರೂ ಸಂಯಮಿಗಳೇ ಯೋಗಿಗಳೇ. ಆದಕಾರಣ ವೇದಾಂತದ ಒರೆಗಲ್ಲು ಸಮಾಜ. ಅಲ್ಲಿ ಬಹಿರಂಗವಾಗಿ ನಿಂತು ನಡಸುವ ಆಚರಣೆಯಲ್ಲಿ ಕಾಣಿಸಿಕೊಳ್ಳದ ವೇದಾಂತ ಬರಿ ಬಾಯ್ ಪ್ರಸಾದ

ಯಾವ ದಿಕ್ಕಿನಿಂದ ವಿಚಾರಿಸಿದರೂ ಮಾನವನಿಗೆ ಸಮಾಜವೇ ತಂದೆ; ಜ್ಞಾನ ಮತ್ತು ಸಂಸ್ಕೃತಿಯನ್ನಿತ್ತು ನೂತನ ಜನ್ಮವನ್ನು ಅದು ಈಯುತ್ತದೆ ಸಮಾಜವೇ ತಾಯಿ; ಅನ್ನನೀರನಿತ್ತು ಅದು ಪಾಲನ-ಪೋಷಣ ಮಾಡುತ್ತದೆ. ಸಮಾಜನೇ ಬಂಧುಬಳಗ; ಜನ್ಮವಿತ್ತ ತಾಯ್ತಂದೆಗಳು ಕಳೆದರೂ ಕರುಣೆಯಿಂದ ಅದು ಸಾಕಿಸಲಹುವುದು. ಸಮಾಜವೇ ಗುರು; ಶಿಕ್ಷಿಸಿ ಬೋಧಿಸುವ ಅಧಿಕಾರಿ; ಜ್ಞಾನನಿಧಿಯನ್ನು ಕೊಟ್ಟು ಕಾಲಪುರುಷನಿಂದ ನಮ್ಮ ಕೃತಿಗಳನ್ನು ನಿರ್ದಾಕ್ಷಿಣ್ಯವಾಗಿ ಪರೀಕ್ಷಿಸಿ ನಮ್ಮ ಯೋಗ್ಯತೆಯನ್ನು ತಿಳಿಯಪಡಿಸುತ್ತದೆ

ಈ ಕಾರಣದಿಂದ ವ್ಯಕ್ತಿಯ ಉದ್ಗಮವಿಕಾಸಗಳು ಸಂಪೂರ್ಣವಾಗಿ ಯಾವುದನ್ನು ಅವಲಂಬಿಸಿವೆಯೊ ಆ ಸಮಾಜವೇ ಮಾನವರ ಪರಮ ಆರಾಧ್ಯ ದೈವತ. ಅದೇ ಮೊದಲು; ಅದೇ ಕೊನೆ; ಮಾನವನು ಪಡೆದು ಕೊಳ್ಳಬೇಕೆಂಬ ಯಾವ ಪರಮ ಸಿದ್ಧಿಯೂ ಅದರ ಮುಖಾಂತರವಾಗಿಯೆ ಇರಬೇಕಲ್ಲದೆ, ಅದನ್ನು ಒದ್ದು, ಅದಕ್ಕೆ ಬೆನ್ನು ತೋರಿಸಿ ಹೋಗುವ ದಾರಿ, ಅಡ್ಡದಾರಿ. ಸಮಾಜದ ಧಾರಣೆ-ಪೋಷಣೆ-ಸ್ಥಿತಿಗೆ ಕಾರಣ ವಾಗುವ ರೀತಿಯಲ್ಲಿ ಶಕ್ತಿಗಳನ್ನು ವಿನಿಯೋಗಿಸುವಲ್ಲಿಯೇ ಮಾನವನ ಉಚ್ಚ ಸಂಸ್ಕೃತಿಯು ಪರಿಣಾಮಗೊಳ್ಳುವುದು. 'ಧಾರಣಾತ್ ಧರ್ಮ ಇತ್ಯಾಹುಃ' ಸಮಾಜಧಾರಣೆಗೆ ಕಾರಣವಾಗುವ ಕೃತಿಯೇ ಧರ್ಮ. ಇದಕ್ಕೆ ಹೊರ ತಾದುದೆಲ್ಲ ಅಧರ್ಮ.

ವ್ಯಕ್ತಿಗಳ ಸಮಷ್ಟಿರೂಪವೇ ಸಮಾಜ. 'ಸಮಷ್ಟಿ' ಎಂದು ಬ್ರಹ್ಮ ನಿಗೂ ಹೆಸರು. ಶ್ರೀ ವಿದ್ಯಾರಣ್ಯರು ಪಂಚದಶಿಯಲ್ಲಿ ಸಮಷ್ಟಿ ಶಬ್ದವನ್ನು ಬ್ರಹ್ಮನೆಂಬ ಅರ್ಥದಲ್ಲಿ ಬಳಸಿದ್ದಾರೆ (೧.೨೫). ಬ್ರಹ್ಮನಿಗೆ ಹಿರಣ್ಯಗರ್ಭ ನೆಂದೂ ಹೆಸರು. 'ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ

ಪತಿರೇಕ ಆಸೀತ್' ಎಂದು ಶ್ರುತಿ ಹಿರಣ್ಯವೆಂದರೆ 'ಅರ್ಥ;' ಪುರುಳು (ಹುರುಳು) ಮಾನವನ ಸಾರ; ಆತನಲ್ಲಿರುವ ಚಿತ್ ಅಥವಾ ಚೈತನ್ಯಶಕ್ತಿ. ಇದುವೆ ಆತನಲ್ಲಿರುವ ಹಿರಣ್ಯಾಂಶ; ಪುರುಳು; ಆದುದರಿಂದ ಸಮಷ್ಟಿ ಸ್ವರೂಪನಾದ ಬ್ರಹ್ಮನು ಹಿರಣ್ಯಗರ್ಭನು; ಎಂದರೆ ಚೈತನ್ಯಪೂರ್ಣನೆಂದು ಅರ್ಥ. 'In Him we live, move and have our being', ಎಂಬ ಯುರೋಪೀಯ ಅನುಭಾವಿಗಳ ವಚನವು ಭಾರತೀಯರ ದರ್ಶನವನ್ನು ಪುಷ್ಟೀಕರಿಸುತ್ತದೆ. ಮಾನವನು ಹಿರಣ್ಯಗರ್ಭನ ಅಂಶ. ಹಿರಣ್ಯಾಂಶ ನಾದ ವ್ಯಕ್ತಿಯ ಬೆಲೆಯೂ ಅಮೌಲಿಕವೆಂದು ಬೇರೆ ಹೇಳಬೇಕಾಗಿಲ್ಲ. ಆದಕಾರಣ ಚೈತನ್ಯವೇ ಲೋಕದ ಉಪಾಸ್ಯ.

ಚೈತನ್ಯವು ವಿವಿಧ ಅನಂತ ಶಕ್ತಿಯ ಆಗರವಾಗಿದೆ. ವಿಶ್ವದಲ್ಲಿ ಇದು ನಾನಾ ವಿಧದಲ್ಲಿ ಹೊರಹೊಮ್ಮುತ್ತಿದೆ. ಬರಿ ಮಾನವರನ್ನೇ ನಿರೀಕ್ಷಿಸಿದರೂ ಅದೆಷ್ಟು ವೈವಿಧ್ಯ ! ಮಾನವರಲ್ಲಿ ಹುದುಗಿರುವ ಈ ಶಕ್ತಿ ವಿಶೇಷಗಳೇ ಪ್ರತಿಯೊಂದು ವ್ಯಕ್ತಿಯ ತಿರುಳು-ಹುರುಳು. ಚೈತನ್ಯ ಶಕ್ತಿಯ ನೆಲೆಯನ್ನು ಕಂಡು ಹಿಡಿಯಲು ಎಲ್ಲ ಶಾಸ್ತ್ರಗಳೂ ತಮ್ಮ ಶಕ್ತಿ ಯನ್ನು ಕೇಂದ್ರೀಕರಿಸಿವೆ; ಆದರೆ ಅದರ ಗುಟ್ಟು ಇನ್ನೂ ತಿಳಿಯದಾಗಿದೆ. ರಾಜಕಾರಣ-ಸಮಾಜಕಾರಣಾದಿಗಳು, ವ್ಯಾಪಾರ-ಉದ್ಯೋಗ-ಶಿಕ್ಷಣ-ಕಲೆ-ಸಾಹಿತ್ಯಾದಿಗಳು ಹಗಲಿರುಳು ತೊಳಲುತ್ತಿರುವುದು ಯಾರ ಸೇವೆಗಾಗಿ? ಆರೋಗ್ಯಶಾಸ್ತ್ರ, ಯೋಗಶಾಸ್ತ್ರ, ಧರ್ಮಶಾಸ್ತ್ರ ಇವುಗಳು ಇದರ ಅಭಿವೃದ್ಧಿ ಗಾಗಿಯೆ ಅನುದಿನವೂ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಲಿವೆ.

ಆದರೆ ಮದುಮಗನನ್ನು ಬಿಟ್ಟೇ ಮದುವೆಗೆ ಹೊರಟಂತಾಗುತ್ತಿದೆ. ಮಾನವರ ಚಟುವಟಿಕೆಗಳ ರೀತಿ ಹಲವು ಬಾರಿ ! ಹಿತ್ತಲ ಸೊಪ್ಪು ಮದ್ದು ಅಲ್ಲ (?) ! ತಮ್ಮಲ್ಲಿಯೇ ಅಳವಟ್ಟಿರುವ ಈ 'ಅರ್ಥ'ವನ್ನು ಮರೆತು ಹೊರಗಿನ ಅರ್ಥಕ್ಕಾಗಿ ಹಂಬಲಿಸಿ ಹರಿದಾಡುವರಲಾ ಮಾನವರು ! ಏನಿದು ವಿಪರೀತವೃತ್ತ ! ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಪರಿಸಗಲ್ಲು ಎಂದು ಮುಂತಾಗಿ ಕವಿಸಂಕೇತದ ಆ ಮಹಾವಸ್ತುವು ಮಾನವ ಹೃದಯ ಗುಹೆಯಲ್ಲಿಯೇ ಅಡಗಿದೆ. ಆವುದರ ಕೃಪಾ-ಪ್ರಸಾದದಿಂದ ಇಂದಿನ ಎಲ್ಲ

ಶಾಸ್ತ್ರ-ಸಾಹಿತ್ಯ-ಕಲೆಗಳು ಅದ್ಭುತರಮ್ಯವಾಗಿ ವಿಕಾಸಗೊಳ್ಳುತ್ತಲಿವೆಯೊ ಆ ಮೂಲ ವಸ್ತುವನ್ನು, ಚಿತ್-ಶಕ್ತಿಯನ್ನೇ ಆದರಿಸದಿರುವುದೇ ? ಅದರ ಸ್ವತಂತ್ರ ಸ್ಥಾನಮಾನವನ್ನು ಒಪ್ಪಿಕೊಳ್ಳದಿರುವುದೇ ? ಏನನ್ಯಾಯ ! ಈ ಅನ್ಯಾಯದ–ದುಷ್ಕೃತ್ಯದ ಫಲವೇ ಈ ಎಲ್ಲ ಸಾಮಾಜಿಕ, ರಾಜಕೀಯ ಅಶಾಂತಿ. ಚೈತನ್ಯ–ಅದುವೇ ಬೆಳಕು; ಬೆಳಕಿನ ಬೆಳಕು ಕಂಕುಳಲ್ಲಿ ಕೂಸನ್ನಿರಿಸಿಕೊಂಡು ಊರೆಲ್ಲ ಹುಡುಕುವ ಮುಗ್ಧೆಯಂತಾಗಿದೆ ನಮ್ಮ ಇಂದಿನ ನಡೆವಳಿ. ಬೆಳಕಿನ ಬೆಳಕನ್ನೇ ಮರೆತುದರಿಂದ ಹೊರಗೆಲ್ಲ ಲೋಕದಲ್ಲಿ ಕಾಳ್ಗತ್ತಲೆಯು ವ್ಯಾಪಿಸಿದ ಅನುಭವವು ಬಂದರೆ ಏನಾಶ್ಚರ್ಯ? ಯಾರಿಗಾಗಿ, ಯಾತಕ್ಕಾಗಿ ಈ ಕರ್ಮಪ್ರವೃತ್ತಿ ? ದೇಹಕ್ಕಾಗಿ ? ದೇಹಕ್ಕೆ ಬೆಲೆ, ಚೈತನ್ಯವುಂಟೆಂದು ಆ ಚೈತನ್ಯವನ್ನೇ ಮರೆತು ದೇಹಪುಷ್ಟಿಯ ಸಂಭ್ರಮವು ನಡೆದರೆ ! ಸವಾರನಿಗಿಂತ ಕುದುರೆಯ ಆರೋಗ್ಯ-ರಕ್ಷಣೆಗೆ ಪ್ರಥಮ ಸ್ಥಾನವನ್ನು ಕೊಟ್ಟಂತೆ ! ಚೈತನ್ಯವನ್ನು ತೇಜಸ್ವಿಯಾಗಿ ಉಳಿಸಿಕೊಂಡು ಅಭಿವೃದ್ಧಿಗೊಳಿಸುವುದಕ್ಕಾಗಿ ದೇಹಸೇವೆ; ಬರಿಮೈಯ ಕೊಬ್ಬು; ಮನುಷ್ಯತ್ವಕ್ಕೇ ಅವಮಾನ; ಚೈತನ್ಯವನ್ನು ಮಂದವಾಗಿಸುವ ಯಾವ ಕೃತ್ಯವೂ ಅಕೃತ್ಯ; ನೀಚಕೃತ್ಯ; ಅಧರ್ಮ ಚೈತನ್ಯ ವಿಕಾಸಕ್ಕೆ ಕಾರಣವಾಗುವ ರೀತಿನೀತಿಗಳೇ ಸನಾತನಧರ್ಮ; ಸದ್ಧರ್ಮ. ಕುಟುಂಬ, ರಾಷ್ಟ್ರ, ಸಮಾಜಗಳೆಲ್ಲವೂ ಚೈತನ್ಯದ ಮಹಾಸನ್ನಿಧಾನವೆಂದು ಅವು ಪೂಜ್ಯ; ಸೇವ್ಯ. ಚೈತನ್ಯವನ್ನು ಕಡೆಗಣಿಸಿ ಬೆಳೆದ ಕುಟುಂಬ, ಭೌತಿಕ ವಸ್ತುಸಂಪದದ ಹುಚ್ಚಿನಿಂದ ಕಲಹದ ಆಗರವಾಗುತ್ತದೆ ಚೈತನ್ಯವನ್ನು ಮರೆತು ಶಬ್ದಪ್ರಮಾಣವನ್ನೆ ಆದರಿಸಹೊರಟ ಸಂಘ-ಸಂಸ್ಥೆ, ರಾಷ್ಟ್ರ-ಸಮಾಜಗಳು ನಿರ್ಜೀವವಾಗಲು ಅಥವಾ ಕಾಳಗದ ಕಣವಾಗಲು ಹೆಚ್ಚು ಅವಧಿ ಬೇಕಾಗಿಲ್ಲ. ಕುಟುಂಬ-ರಾಷ್ಟ್ರ-ಸಮಾಜ ಯಾವ ಹೆಸರಿನಲ್ಲಾಗಲಿ ಚೈತನ್ಯದ ಪೋಷಣೆ, ಚೈತನ್ಯದ ವಿಕಾಸವಲ್ಲವೆ ಉಳಿದುದೆಲ್ಲವೂ ಗೌಣ ಅಥವಾ ಆನುಷಂಗಿಕ; ತತ್ಪ್ರೀತ್ಯರ್ಥ. ಲೋಕದ ಚೈತನ್ಯದಲ್ಲಿ ಭಿನ್ನ ಭೇದಗಳಿಲ್ಲ; ಅದೆಲ್ಲವೂ ಒಂದು. ಆ ಮಹಾಚೈತನ್ಯದ ನೆನಹಿನಿಂದ ವ್ಯಕ್ತಿಗಳಿಗೆ ಎಂದರೆ, ಅವರಲ್ಲಿ ಕಾಣಿಸಿಕೊಳ್ಳುವ ಚೇತನಾಂಶ

ಆದರಿಸಬೇಕು; ಬೆಲೆಕೊಡಬೇಕು. ಹಿಗ್ಗುಗೊಳ್ಳಲು ನೆರವಾಗಬೇಕು. ಎಲ್ಲ ಮಾನವ ಪ್ರಯತ್ನಗಳ ಇತ್ಯರ್ಥವಿದು. ಇಲ್ಲಿಯೆ ಸಾರ್ಥಕತೆ.

ಸಮಾಜವೆಂಬುದು ಚೈತನ್ಯಸಾಗರ ವ್ಯಕ್ತಿ ಚೇತನಾಂಶ. ಎತ್ತ ಪ್ರವಹಿಸಿದರೂ ಎಲ್ಲ ನದಿಗಳೂ ಸಾಗರವನ್ನೇ ಸೇರುವಂತೆ, ವ್ಯಕ್ತಿಯ ಮೋಕ್ಷ ಸಮಾಜದಲ್ಲಿ. ವ್ಯಕ್ತಿ ಮತ್ತು ಸಮಾಜದೊಳಗಿನ ನಿತ್ಯ ಸಂಬಂಧ ವಿದು. ಅಲ್ಲಿಂದಲೇ ಜೀವನ ಪಡೆದು, ಅದರಲ್ಲಿಯೇ ವಿಲೀನವಾಗುವುದು.

ಈ ಸನಾತನ ನಿತ್ಯನೂತನ ಚೈತನ್ಯವನ್ನು ದಿನಾಲು ಒಮ್ಮೆಯಾದರೂ ಅವಲೋಕಿಸಿ, ತನ್ಮಯತೆಯಿಂದ ತಲೆವಾಗದೆ ಇರುವ ಮಾನವರು ಬೇಗ ನೆಯೆ ಮನುಷ್ಯತ್ವಕ್ಕೆ ಎರವಾಗುತ್ತಾರೆ. ಏಕೆಂದರೆ ಇದನ್ನು (ಚೈತನ್ಯ) ಮರೆತವನು ತಾನು ಯಾವ ಊರಿಗೆ ಹೊರಟಿರುವೆನು ಅಥವಾ ತನ್ನ ಊರಾವುದೆಂಬುದನ್ನೇ ಮರೆತು ಪ್ರವಾಸ ಬೆಳೆಸುತ್ತಿರುವ ಪ್ರವಾಸಿಯಂತೆ, ಸುತ್ತುತ್ತಿರುವನಾದರೂ ತನ್ನ ನಿಲವು ಯಾವುದೆಂಬುದನ್ನರಿಯನು. ಆಶ್ಚರ್ಯಪಡುವ ಶಕ್ತಿಯಲ್ಲಿ ಸ್ಫೂರ್ತಿಯ ಉಗಮವಿದೆ. ಸ್ಫೂರ್ತಿ ಯೆಂದರೆ ಚೈತನ್ಯದ ಉಕ್ಕು; ಹೊರಹೊಮ್ಮುವ ಚೈತನ್ಯ. ಆಶ್ಚರ್ಯ ಎಂದರೇನು ? ಆಃ ! ಆಹಾ ! ಎಂಬ ಚರ್ಯೆ. ಚರ್ಯೆ ನಡೆವಳಿ. ಹಾಃ ! ಆಃ ! ಎಂಬ ಆನಂದೋರ್ಮಿಗಳಿಂದ ನವಿರೇಳುವಾಗಣ ಹಿಗ್ಗಿನ ಸುಖವನ್ನು ಬಲ್ಲ ವರೇ ಬಲ್ಲರು. ಆಃ ಚರ್ಯೆಯನ್ನು ಹೊಂದುವ ಸಾಮರ್ಥ್ಯವನ್ನು—ಅಂತಹ ಮನಸ್ಥಿತಿಯನ್ನು ಕಳೆದುಕೊಂಡಂತಹನಿಗಿಂತ ದುರ್ದೈವಿ ಬೇರೊಬ್ಬನಿಲ್ಲ. ತನ್ನ ಒಳಗಣ ಅಥವಾ ನೆರೆಹೊರೆಯವರ ಇಲ್ಲವೆ ಲೋಕದೊಳಗಣ ಮಹಾವಿಭೂತಿಗಳ ಅನಂತ ಶಕ್ತಿಯ ಚೈತನ್ಯ ಜ್ಯೋತಿ ಯನ್ನು ನೆನೆನೆನೆದು ಆಃ ಚರ್ಯಯುಕ್ತರಾಗಲು ಕಲಿಯಬೇಕು. ಇದರ ಅನುದಿನದ ಸಾಧನವನ್ನಿಡಬೇಕು ಸೃಷ್ಟವಸ್ತುಗಳಲ್ಲಿರುವ ಸಹಜ ಸೌಂದರ್ಯವನ್ನು ಕಂಡು ಅಥವಾ ಸ್ಮರಿಸಿ ಆಃ ಚರ್ಯಗೊಳ್ಳುವ ಶಕ್ತಿಯು ಎಳೆಯತನದಲ್ಲಿ ವಿಶೇಷವಾಗಿರುತ್ತದೆ. ತಿಳುವಳಿಕೆ ಹೆಚ್ಚಾದಂತೆ ಈ ಶಕ್ತಿಯು ಪರಿಷ್ಕಾರಹೊಂದಿ ಇನ್ನೂ ಪುಟಗೊಳ್ಳಬೇಕು. ಬಾಳಿನೊಳಗಿನ ಸೋಜಿಗಗೊಂಬ ಹೃದಯಭಾವವೇ ನಷ್ಟವಾಗುತ್ತಿದ್ದರೆ ಆ ವ್ಯಕ್ತಿಯು

ಜೀವನದ ರೀತಿಯಲ್ಲಿ ಅಥವಾ ವಿಚಾರದ ಪದ್ಧತಿಯಲ್ಲಿ ಎಲ್ಲಿಯೋ ಭಯಾವಹವಾದ ದೋಷವು ತಲೆಯೆತ್ತಿಕೊಂಡಿದೆಯೆಂದು ನಿಶ್ಚಿತವಾಗಿ ತಿಳಿಯಬೇಕು.

ಯಾವುದಕ್ಕೆ ಎಷ್ಟು ಬೆಲೆಯೆಂಬುದನ್ನು ನಿರ್ಧರಿಸುವ ಹದವು ತಿಳಿಯದೆ ಅಥವಾ ಪೇಟೆಯ ಸುಳ್ಳುಬೆಲೆಯ ಉಬ್ಬಿದ ಅಂಕಿಗಳನ್ನೇ ನೆಮ್ಮಿ ಜೀವನವನ್ನು ಹಸಗೆಡಿಸಿಕೊಳ್ಳುವ ಜನರೇ ಹೆಚ್ಚು. ದಿನದಲ್ಲಿ ಒಂದರಗಳಿಗೆಯಾದರೂ ಆಃ-ಚರದ ತನ್ಮಯತೆ ಇಲ್ಲದೆಯಂತೂ ಜೀವಕ್ಕೆ ಸಮಾಧಾನವಿಲ್ಲ. ತಪ್ಪು ಹಾದಿಯಿಂದ ಹೊರಟುದರಿಂದ ಸಹ-ಜತೆಯೊಳಗಿನ ಸೌಂದರ್ಯವನ್ನು ಕಂಡು ಹಿಗ್ಗುಗೊಂಬ ಶಕ್ತಿಯು ಕುಂದಿದಂತಾಗಿದೆ. ಇಂತಹ ಹೊತ್ತಿನಲ್ಲಿ ಆಃಚರ್ಯಕ್ಕಾಗಿ ಕೃತ್ರಿಮ ಸಾಧನಗಳನ್ನು ಉಪಯೋಗಿಸುವ ಮೋಹವು ಉಂಟಾಗುವುದು. ಸಿನೇಮಾ, ರೇಡಿಯೋ, ವ್ಯಾಸಪೀಠ, ರಂಗಭೂಮಿ, ನೈಟಕ್ಲಬ್, ಪತ್ತೇದಾರಿ ಕಾದಂಬರಿ, ರೋಮಾಂಚಕಾರಿ ಉತ್ತಾನ ಶೃಂಗಾರದ ಕಥೆ ಮತ್ತು ಕವಿತೆ, ಮದ್ಯ, ಮದಿರಾಕ್ಷಿ........ಇಂತಹ ಸಾಧನಗಳಿಂದ ಎಂತೂ ಮೈಮರೆಯಲು ಒದ್ದಾಟವು ನಡೆಯುವದು. ರಸಿಕತೆ, ಸಂಸ್ಕೃತಿಯನ್ನು ಹೆಚ್ಚಿಸಿಕೊಂಡವರಿಗೆ ಸಹಜ ಆಃಚರ್ಯದ ತನ್ಮಯತೆಯಿಂದ ಪ್ರಾಪ್ತವಾಗುವ ಆನಂದದ ಶಾಂತಿಯು ಮೇಲಿನ ಕೃತ್ರಿಮ ಸಾಧನಗಳಿಂದ ಎಂದೂ ದೊರೆಯದು. ಕಜ್ಜೀ ತುರಿಸಿಕೊಂಡು ಸುಖಬಟ್ಟಂತೆ; ಕೆರೆದುಕೊಂಬಾಗ ಸಮಾಧಾನವೆನಿಸಿದರೂ ಮುಂದಿನ ಕ್ಷಣದಲ್ಲಿಯೇ ಶಾಂತಿಯ ಬದಲು ಒಳಗಣ ಹುರಿ ಹುರಿ, ಕುರಕುರಿಯ ದುಃಖವು ಇನ್ನಿಷ್ಟು ಒತ್ತರಿಸುವದು. ಇವೆರಡೂ ಸುಖಾನಂದಗಳ ಜಾತಿಯೇ ಬೇರೆ.

ಅನಂತ-ನಿತ್ಯ-ಶಕ್ತಿಯ ಅಗಾಧತೆಯ ಅರಿವು ಉಂಟಾದವರ ಹೆಮ್ಮೆ-ಬಿಮ್ಮುಗಳೆಲ್ಲ ಮಾಯವಾಗುವವು. ಆಃಚರ್ಯಾನಂದದ ನೆನಹಿನಿಂದ ಪ್ರಶಾಂತ ಮನಸ್ಕರಾಗಿ ಆ ತಿಳಿ-ಬೆಳಕಿನಲ್ಲಿ ತಮ್ಮ ಜೀವನವನ್ನು ಬೆಳಗಿಸುವ ವ್ಯಕ್ತಿಗಳು ಸಮಾಜದ ನಿಜವಾದ ಸಮತೆಗೆ, ಸಮತ್ವಕ್ಕೆ ಕಾರಣರಾಗುತ್ತಾರೆ. ಒಳಗಣ ಈ ಬಗೆಯ ಸಮತ್ವಕ್ಕೆ ಪ್ರಾಧಾನ್ಯವನ್ನು ಕೊಡದ

ಹೊರಗಿನ ಸಮತಾವಾದವು, ವಾದಕ್ಕೆ ಎಂದರೆ ಜಗಳಕ್ಕೇ ಆಹ್ವಾನ ವೀಯುವುದು ವ್ಯಕ್ತಿಯು ಶೂನ್ಯವೆಂದು ಬಗೆಯದೆ, ಅದರೊಳಗಿನ ಅದ್ಭುತಶಕ್ತಿಯನ್ನು ಆದರಿಸಲಿಕ್ಕೆ ಗಾರ್ಗಿಯು ಉಪದೇಶಿಸಿರುವನಾದರೂ ಪಕ್ಷದ ಶಿಸ್ತಿನ ಹೆಸರಿನಲ್ಲಿ ಇಂದಿನ ರಾಜಕೀಯ ಭಂಡಾಟದೊಳಗೆ ವ್ಯಕ್ತಿಗೆ ಬೆಲೆಯೇ ಇಲ್ಲದಾಗಿದೆ! ಪಕ್ಷದ ಮುಂದೆ ವ್ಯಕ್ತಿಯು ಶೂನ್ಯ! ವಿವೇಕ ಶಕ್ತಿಯನ್ನು ಬಲಿಕೊಡದೆ ಪಕ್ಷಾಭಿನಿವೇಶವೇ ಉಂಟಾಗಲಾರದು! ಪಕ್ಷದಲ್ಲಿ 'ಶೂನ್ಯ' ವ್ಯಕ್ತಿಗಳು ಇದ್ದಷ್ಟು ಆ ಪಕ್ಷದ ಸಾಮರ್ಥ್ಯವು ಹೆಚ್ಚು. ಏಕೆಂದರೆ ಆ ಪಕ್ಷವು ಇಂತಹರನ್ನು ಪಕ್ಷದ ಕೆಲಸ ಸಾಧಿಸಲು ಬೇಕಾದಂತಹ ಕೆಲಸಕ್ಕೂ ಉಪಯೋಗಿಸಬಲ್ಲದು ವ್ಯಕ್ತಿತ್ವವುಳ್ಳವರು ಹೀಗೆ ಒಬ್ಬರ ಕೈಗೊಂಬೆಗಳೆಂದೂ ಆಗಲಾರರು ಚೈತನ್ಯಶಕ್ತಿಯು ನಿತ್ಯನೂತನ. ನವೋನವತೆಯು ಅದರ ಮೂಲಭೂತಗುಣ. ಆದಕಾರಣ ಜೀವಂತವಾಗಿ ಉಳಿಯಬೇಕೆಂಬ ಹಂಬಲದ ವ್ಯಕ್ತಿಯು ಯಾವುದೇ ಪಕ್ಷದ ಯಾಂತ್ರಿಕ ಸಾಧನವಾಗಲು ತನ್ನ ನವೋನವತೆಯನ್ನು ಕಳೆದುಕೊಳ್ಳಲು ಸಿದ್ಧವಾಗಲಾರದು ಸತ್ಕಾರ್ಯದಲ್ಲಿ ತೊಡಗಿದ ಎಲ್ಲ ಪಕ್ಷಗಳೂ ಅವರ ಪಕ್ಷ. ಪಕ್ಷಪಾತವು ಅವರಿಗೆ ಸರಿಬಾರದು. ಅವರು ಒಟ್ಟು ಸಮಾಜದ ಪಕ್ಷಪಾತಿಗಳು. ಯಾವುದೊಂದೇ ಪಕ್ಷವೆಂದರೆ, ಸಮಾಜವಲ್ಲ. ಸಮಾಜದ ವೈವಿಧ್ಯವನ್ನು ನಷ್ಟಗೊಳಿಸಿ, ಒಂದೇ ಪಕ್ಷಕಟ್ಟುವ ಹವ್ಯಾಸದವರು, ಇಡೀ ಸಮಾಜವನ್ನು ಒಂದೇ ಪಕ್ಷ ಮಾಡಬೇಕೆಂಬುವರು ಸಮಾಜದ ವೈರಿಗಳು. ಏಕೆಂದರೆ ಒಂದೇ ಆಗಿರುವುದು ಅಂದಗೇಡು. ವಿವಿಧತೆಯಲ್ಲಿ ಸೌಂದರ್ಯವಿದೆ.* ವೈವಿಧ್ಯ ಪೂರ್ಣವಲ್ಲದ್ದು ಸಮಷ್ಟಿಯಲ್ಲ; ಸಮಸ್ತರನ್ನು ಒಳಗೊಂಬುದು ಸಮಾಜ ಆದಕಾರಣ ನಿಜವಾದ ಸಾಮಾಜಿಕ ವೃತ್ತಿಯ ಸಾಂಸ್ಕೃತಿಕ ವ್ಯಕ್ತಿಯು ಪಕ್ಷಾತೀತ. ಇದ್ದರೆ ಎಲ್ಲ ಪಕ್ಷಗಳು ಆತನವು. ಅಲ್ಲವಾದರೆ ಯಾವುದೂ ಆತನ ಪಕ್ಷವಲ್ಲ. ಏಕೆಂದರೆ ಸತ್ಯವು ಏಕಪಕ್ಷೀಯವಲ್ಲ.

---

* ಸೌಂದರ್ಯ ವಿಚಾರ ಪುಟ ೭—೧೦.

ಯಾವ ಚೈತನ್ಯದ ಸ್ವಲ್ಪ ಮಾತ್ರ ಸ್ಪರ್ಶದಿಂದ ಅಗಾಧ ಪ್ರತಿಭೆಯ ಮಹಾಕವಿಗಳೂ ಲೋಕಪ್ರಖ್ಯಾತರಾದ ವಿಜ್ಞಾನಿಗಳೂ ಮನಸ್ಸನ್ನು ಸೂರೆಗೊಂಬ ವಾದಿ ವಾಗ್ಮಿಗಳೂ ಅತುಲ ವೀರ ಸಾಹಸಿಗರೂ ನಾನಾ ತೆರದ ಶಕ್ತಿಯುತರಾದ ಮಹಾಮಹಿಮರಾದ ವಿಭೂತಿಗಳೂ ಕಾಣಿಸಿಕೊಳ್ಳುವರೋ ಆ ಚೈತನ್ಯದ ಒಂದಂಶವೆ ಅಳವಟ್ಟಿರುವ ವ್ಯಕ್ತಿಯೂ ವಂದ್ಯವಾಗಿದೆ. 'ಓಂ ನಮೋ ಮಹದ್ಭ್ಯೋ, ನಮೋ ಅರ್ಭಕೇಭ್ಯೋ, ನಮೋಯುವಭ್ಯೋ, ನಮ ಆಶಿನೇಭ್ಯಃ' ಹಿರಿಯರು, ಕಿರಿಯರು, ತರುಣರು, ಅಶನಾರ್ಥಿಗಳು ಎಂಬ ವ್ಯಕ್ತಿಮಾತ್ರರಿಗೂ ನಮೋ ನಮೋ ಎಂದು ವಂದಿಸುವಲ್ಲಿ ಚೈತನ್ಯದ ಉಪಾಸನೆಯೇ ಇದೆ. ಕುಮಾರಪೂಜೆ, ಕುಮಾರಿಪೂಜೆ, ದಾಂಪತ್ಯ ಪೂಜೆ ಮೊದಲಾದ ಬಗೆಯ ಸಂತರ್ಪಣ-ಸಮಾರಾಧನಗಳ ಮೂಲೋದ್ದೇಶವು ಚೈತನ್ಯದ ಹಿಗ್ಗಿಗಾಗಿ ಮಾಡುವ ಸಾಧನವಲ್ಲದೆ ಬರಿಯ ತಂಡುಲ ಧ್ವಂಸ ಅನ್ನಯಜ್ಞವಲ್ಲ. ಈ ಚೈತನ್ಯಕ್ಕೇ ಮುಖ್ಯವಾದ ಗಮನಕೊಟ್ಟಲ್ಲಿ ಆದರ ಅಂತಃಶಕ್ತಿಯ ಸ್ಮರಣ ಮಾತ್ರದಿಂದ ಮಾನವ ವ್ಯಕ್ತಿಗಳ ವಿಷಯದಲ್ಲಿ ಅವರ ದೇಹಗುಣಗಳ ನೆನವಾಗಿ ಅಥವಾ ದೇಹಗುಣಗಳ ಕ್ರಿಯೆಗೆ ಪ್ರತಿಕ್ರಿಯೆಯೆಂದು ತಲೆದೋರುವ ಅಸಾದರ, ಜುಗುಪ್ಸೆಯೆಲ್ಲವೂ ಮೆಲ್ಲನೆ ಇಲ್ಲದಾಗುವುದು. ಎಂತಹ ಸಾಮಾನ್ಯ ವ್ಯಕ್ತಿಯಿದ್ದರೂ ಅದರಲ್ಲಿ ಕೆಲವೊಂದು ಗುಣ ವಿಶೇಷವು ಇದ್ದೇ ಇರುತ್ತದೆ; ಏಕೆಂದರೆ ಚೈತನ್ಯ ಶಕ್ತಿಯು ಗುಣವಿಹೀನವಲ್ಲ; ಅನಂತಗುಣಯುತ. ಯಾವ ವ್ಯಕ್ತಿಯಲ್ಲಿ ಯಾವ ಗುಣಾಂಶವು ಕಾಣಿಸಿಕೊಳ್ಳುತ್ತಿರುವುದೆಂಬುದನ್ನು ಕೌತುಕದಿಂದ ಕಂಡುಹಿಡಿವ ತಾಳ್ಮೆಬೇಕು. ಆದರ ಭಾವಬೇಕು. ಸ್ವಾರ್ಥ ಕಾರ್ಯಸಾಧಿಸಲು 'ಪೊಲಿಸಿ' ಎಂದು ಮಾತಿನಲ್ಲಿ ಹಾಲೂ ಜೇನೂ ಸುರಿಸುವ ಚತುರ ವ್ಯವಹಾರಿಗಳ ಧೂರ್ತ ಧೋರಣದ ಆದರವು ಭಯಾವಹವಾದುದು; ವ್ಯಕ್ತಿಗಳಲ್ಲಿ ಅಡಕವಾಗಿರುವ ಅಮರ ಚೈತನ್ಯಶಕ್ತಿಯ ಅದ್ಭುತತೆಯನ್ನು ನೆನೆದು ಹೊರಹೊಮ್ಮುವ ಆದರ, ಪ್ರೀತಿ, ವಿನಯಗಳಲ್ಲಿರುವ ಮಾಧುರ್ಯವು ಕೃತ್ರಿಮವಾದ ಅತಿ ವಿನಯದಲ್ಲಿ ಎಂದೂ ಇರಲಾರದು. ಅತಿ ಪರಿಚಯದಿಂದ ಮನಸ್ಸು ಬಧಿರವಾಗಿ, ಅದ್ಭುತತೆ, ಆಶ್ಚರ್ಯ, ಕೌತುಕ, ಆದರಾದಿ ಭಾವಗಳಿಗೆ ಎರವಾಗುತ್ತದೆ. ಆದುದರಿಂದ

ರಿಂದ ತಿಳಿದವರು ಕಾಲಕಾಲಕ್ಕೆ ತಕ್ಕ ಉಪಾಯಗಳಿಂದ ಮನಸ್ಸನ್ನು ಆವರಿಸುವ ಹಾವಸೆಯ ಈ ಪಾಚಿಯನ್ನು ತೊಡೆದುಹಾಕಬೇಕು.

ಸಮಾಜವೆಂಬುದು ಒಂದು ಕಲಾಮಂದಿರ. ಅದರಲ್ಲಿರುವ ವಿಧವಿಧದ ಚಿತ್ರಗಳೂ ಮೂರ್ತಿಗಳೂ ಎಲ್ಲ ಮಾನವ ವ್ಯಕ್ತಿಗಳು. ಕೆಲವೊಂದು ಮೂರ್ತಿ ಚಿತ್ರಗಳನ್ನು ಒಂದೊಂದು ವಿಶಿಷ್ಟ ಮರ್ಯಾದೆಯಿಟ್ಟು ಕಾಣ ಬೇಕಿರುತ್ತದೆ ಈ ಮರ್ಯಾದೆಯು ಸರಿಯಾಗಿ ಸಾಧಿಸದೆ ಇದ್ದರೆ ವ್ಯಕ್ತಿಗತ ಸೌಂದರ್ಯವು ಮನಸ್ಸಿಗೆ ಹಿಡಿಯುವುದಿಲ್ಲ. ಈ ವ್ಯಕ್ತಿಗಳು ಅಂದಗೇಡಿ ಗಳಾಗಿ ಕಾಣಲು ಇದೊಂದು ಮುಖ್ಯವಾದ ಕಾರಣ. ಮರ್ಯಾದೆಯನ್ನು ಇಟ್ಟು ನೋಡುವ ಹದವು ತಿಳಿದರೆ, ಲೋಕದಲ್ಲಿ ಅಸೌಂದರ್ಯವೆಂಬುದೇ ಇಲ್ಲ. ಒಂದೊಂದು ವ್ಯಕ್ತಿಯ ಚೆಲುವು ಒಂದೊಂದು ವಿಶಿಷ್ಟ ನಿಲುವೆ ಯಲ್ಲಿ ಎದ್ದು ಕಾಣುವುದು. ಹೊರಗೆ ಸಾಮಾನ್ಯವಾಗಿ ಕುರೂಪಿಯಾಗಿ ತೋರುವ ಸಿನೇಮಾ ನಟನಟಿಯರನ್ನು ಜಾಣರಾದ ಫೋಟೋಗ್ರಾಫರರು ವಿಶಿಷ್ಟ ಮಗ್ಗುಲಿನಿಂದ ಅವರ ಛಾಚಿತ್ರಗಳನ್ನು ಮೂಡಿಸಿಕೊಂಡು, ಆಕ- ರ್ಷಕವಾಗುವಂತೆ ಮಾಡುತ್ತಾರೆ. ಆದಕಾರಣ ಮರ್ಯಾದೆಯನ್ನು ಇಟ್ಟು ನೋಡುವುದು ಅಗತ್ಯವಾಗಿರುವಂತೆ, ವಿಶಿಷ್ಟ ನಿಲುವೆಯಲ್ಲಿ ಕಾಣುವುದೂ ಮಹತ್ವದ ಸಂಗತಿಯಾಗಿದೆ ಹೃದಯದಿಂದ ಅನ್ಯರವಿಷಯಕ ದುರ್ಭಾವದ ಕೊಳೆಯನ್ನು ಹೋಗಲಾಡಿಸಿಕೊಳ್ಳಲು, ವ್ಯಕ್ತಿಗಳಲ್ಲಿರುವ ಕುರೂಪತೆ ಯನ್ನು ಮರೆಯಲು ರಸಿಕರಾದವರು ಇವೆರಡೂ ಉಪಾಯಗಳನ್ನು ಅವ ಲಂಬಿಸುವರು ಮೂರ್ತಿ, ಚಿತ್ರಗಳಂತೆ ವ್ಯಕ್ತಿಗಳು ನಿರ್ಜೀವ ವಸ್ತುಗಳಲ್ಲ. ಮೂರ್ತಿ, ಚಿತ್ರಗಳನ್ನು ಸರಿಯಾದ ಎತ್ತರ, ಬೆಳಕು, ಅಂತರ ಮತ್ತು ಹಿನ್ನೆಲೆಗಳನ್ನು ನೋಡಿಕೊಂಡು ಹೊಂದಿಕೆಯಾಗುವ ರೀತಿಯಲ್ಲಿ ಬೇರೆ ಯವರು ಇಡುವ ಅಥವಾ ಹಚ್ಚುವ ಅವಶ್ಯಕತೆಯಿರುವಂತೆ ವ್ಯಕ್ತಿಗಳಿಗೆ ಇಲ್ಲ. ವ್ಯಕ್ತಿಯು ತಾನೇ ತನ್ನ ಹಿನ್ನೆಲೆ ಸ್ಥಾನ ಮರ್ಯಾದೆಗಳನ್ನು ನಿರ್ಧರಿಸಿ ಕೊಂಡು ನಿಂತು ಸಮಾಜ ಮಂದಿರದ ಅಂದವನ್ನು ಅಭಿವೃದ್ಧಿಗೊಳಿಸಲು ನೆರವಾಗುವುದು ಕರ್ತವ್ಯವಾಗಿರುತ್ತದೆ. ಜನಗಳಲ್ಲಿ ಮರ್ಮಜ್ಞತೆ,

ಯಾವ ಚೈತನ್ಯದ ಸ್ವಲ್ಪ ಮಾತ್ರ ಸ್ಪರ್ಶದಿಂದ ಅಗಾಧ ಪ್ರತಿಭೆಯ ಮಹಾಕವಿಗಳೂ ಲೋಕವಿಖ್ಯಾತರಾದ ವಿಜ್ಞಾನಿಗಳೂ ಮನಸ್ಸನ್ನು ಸೂರೆಗೊಂಬ ವಾದಿ ವಾಗ್ಮಿಗಳೂ ಅತುಲ ವೀರ ಸಾಹಸಿಗರೂ ನಾನಾ ತೆರದ ಶಕ್ತಿಯುತರಾದ ಮಹಾಮಹಿಮರಾದ ವಿಭೂತಿಗಳೂ ಕಾಣಿಸಿಕೊಳ್ಳುವರೊ ಆ ಚೈತನ್ಯದ ಒಂದಂಶವೆ ಆಳವಟ್ಟಿರುವ ವ್ಯಕ್ತಿಯೂ ವಂದ್ಯವಾಗಿದೆ. 'ಓಂ ನಮೋ ಮಹದ್ಭ್ಯೋ, ನಮೋ ಅರ್ಭಕೇಭ್ಯೋ, ನಮೋ ಯುವಭ್ಯೋ, ನಮ ಆಶಿನೇಭ್ಯಃ' ಹಿರಿಯರು, ಕಿರಿಯರು, ತರುಣರು, ಆಶನಾರ್ಥಿಗಳು ಎಂಬ ವ್ಯಕ್ತಿಮಾತ್ರರಿಗೂ ನಮೋ ನಮೋ ಎಂದು ವಂದಿಸುವಲ್ಲಿ ಚೈತನ್ಯದ ಉಪಾಸನೆಯೇ ಇದೆ. ಕುಮಾರಪೂಜೆ, ಕುಮಾರಿಪೂಜೆ, ದಾಂಪತ್ಯ ಪೂಜೆ ಮೊದಲಾದ ಬಗೆಯ ಸಂತರ್ಪಣ-ಸಮಾರಾಧನಗಳ ಮೂಲೋದ್ದೇಶವು ಚೈತನ್ಯದ ಹಿಗ್ಗಿಗಾಗಿ ಮಾಡುವ ಸಾಧನವಲ್ಲದೆ ಬರಿಯ ತಂಡುಲ ಧ್ವಂಸ ಅನ್ನಯಜ್ಞವಲ್ಲ. ಈ ಚೈತನ್ಯಕ್ಕೇ ಮುಖ್ಯವಾದ ಗಮನಕೊಟ್ಟಲ್ಲಿ ಆದರ ಅಂತಃಶಕ್ತಿಯ ಸ್ಮರಣ ಮಾತ್ರದಿಂದ ಮಾನವ ವ್ಯಕ್ತಿಗಳ ವಿಷಯದಲ್ಲಿ ಅವರ ದೇಹಗುಣಗಳ ನೆನಪಾಗಿ ಅಥವಾ ದೇಹಗುಣಗಳ ಕ್ರಿಯೆಗೆ ಪ್ರತಿಕ್ರಿಯೆಯೆಂದು ತಲೆದೋರುವ ಅನಾದರ, ಜುಗುಪ್ಸೆಯೆಲ್ಲವೂ ಮೆಲ್ಲನೆ ಇಲ್ಲದಾಗುವುದು. ಎಂತಹ ಸಾಮಾನ್ಯ ವ್ಯಕ್ತಿಯಿದ್ದರೂ ಅದರಲ್ಲಿ ಕೆಲವೊಂದು ಗುಣ ವಿಶೇಷವು ಇದ್ದೇ ಇರುತ್ತದೆ; ಏಕೆಂದರೆ ಚೈತನ್ಯ ಶಕ್ತಿಯು ಗುಣವಿಹೀನವಲ್ಲ; ಅನಂತಗುಣಯುತ. ಯಾವ ವ್ಯಕ್ತಿಯಲ್ಲಿ ಯಾವ ಗುಣಾಂಶವು ಕಾಣಿಸಿಕೊಳ್ಳುತ್ತಿರುವುದೆಂಬುದನ್ನು ಕೌತುಕದಿಂದ ಕಂಡುಹಿಡಿವ ತಾಳ್ಮೆಬೇಕು. ಆದರ ಭಾವಬೇಕು. ಸ್ವಾರ್ಥ ಕಾರ್ಯಸಾಧಿಸಲು 'ಪೊಲಿಸಿ' ಎಂದು ಮಾತಿನಲ್ಲಿ ಹಾಲೂ ಜೇನೂ ಸುರಿಸುವ ಚತುರ ವ್ಯವಹಾರಿಗಳ ಧೂರ್ತ ಧೋರಣದ ಆದರವು ಭಯಾವಹವಾದುದು; ವ್ಯಕ್ತಿಗಳಲ್ಲಿ ಅಡಕವಾಗಿರುವ ಅಮರ ಚೈತನ್ಯಶಕ್ತಿಯ ಅದ್ಭುತತೆಯನ್ನು ನೆನೆದು ಹೊರಹೊಮ್ಮುವ ಆದರ, ಪ್ರೀತಿ, ವಿನಯಗಳಲ್ಲಿರುವ ಮಾಧುರ್ಯವು ಕೃತ್ರಿಮವಾದ ಅತಿ ವಿನಯದಲ್ಲಿ ಎಂದೂ ಇರಲಾರದು. ಅತಿ ಪರಿಚಯದಿಂದ ಮನಸ್ಸು ಬಧಿರವಾಗಿ, ಅದ್ಭುತತೆ, ಆಶ್ಚರ್ಯ, ಕೌತುಕ, ಆದರಾದಿ ಭಾವಗಳಿಗೆ ಎರವಾಗುತ್ತದೆ. ಆದುದರಿಂದ

ರಿಂದ ತಿಳಿದವರು ಕಾಲಕಾಲಕ್ಕೆ ತಕ್ಕ ಉಪಾಯಗಳಿಂದ ಮನಸ್ಸನ್ನು ಆವರಿಸುವ ಹಾವಸೆಯ ಈ ಪಾಚಿಯನ್ನು ತೊಡೆದುಹಾಕಬೇಕು.

ಸಮಾಜವೆಂಬುದು ಒಂದು ಕಲಾಮಂದಿರ. ಅದರಲ್ಲಿರುವ ವಿಧವಿಧದ ಚಿತ್ರಗಳೂ ಮೂರ್ತಿಗಳೂ ಎಲ್ಲ ಮಾನವ ವ್ಯಕ್ತಿಗಳು. ಕೆಲವೊಂದು ಮೂರ್ತಿ ಚಿತ್ರಗಳನ್ನು ಒಂದೊಂದು ವಿಶಿಷ್ಟ ಮರ್ಯಾದೆಯಿಟ್ಟು ಕಾಣಬೇಕಿರುತ್ತದೆ ಈ ಮರ್ಯಾದೆಯು ಸರಿಯಾಗಿ ಸಾಧಿಸದೆ ಇದ್ದರೆ ವ್ಯಕ್ತಿಗತ ಸೌಂದರ್ಯವು ಮನಸ್ಸಿಗೆ ಹಿಡಿಯುವುದಿಲ್ಲ. ಈ ವ್ಯಕ್ತಿಗಳು ಅಂದಗೇಡಿಗಳಾಗಿ ಕಾಣಲು ಇದೊಂದು ಮುಖ್ಯವಾದ ಕಾರಣ. ಮರ್ಯಾದೆಯನ್ನು ಇಟ್ಟು ನೋಡುವ ಹದವು ತಿಳಿದರೆ, ಲೋಕದಲ್ಲಿ ಅಸೌಂದರ್ಯವೆಂಬುದೇ ಇಲ್ಲ. ಒಂದೊಂದು ವ್ಯಕ್ತಿಯ ಚೆಲುವು ಒಂದೊಂದು ವಿಶಿಷ್ಟ ನಿಲುವೆಯಲ್ಲಿ ಎದ್ದು ಕಾಣುವುದು. ಹೊರಗೆ ಸಾಮಾನ್ಯವಾಗಿ ಕುರೂಪಿಯಾಗಿ ತೋರುವ ಸಿನೇಮಾ ನಟನಟಿಯರನ್ನು ಜಾಣರಾದ ಫೋಟೋಗ್ರಾಫರರು ವಿಶಿಷ್ಟ ಮಗ್ಗುಲಿನಿಂದ ಅವರ ಭಾಚಿತ್ರಗಳನ್ನು ಮೂಡಿಸಿಕೊಂಡು, ಆಕರ್ಷಕವಾಗುವಂತೆ ಮಾಡುತ್ತಾರೆ. ಆದಕಾರಣ ಮರ್ಯಾದೆಯನ್ನು ಇಟ್ಟು ನೋಡುವುದು ಅಗತ್ಯವಾಗಿರುವಂತೆ, ವಿಶಿಷ್ಟ ನಿಲುವೆಯಲ್ಲಿ ಕಾಣುವುದೂ ಮಹತ್ವದ ಸಂಗತಿಯಾಗಿದೆ ಹೃದಯದಿಂದ ಅನ್ಯರವಿಷಯಕ ದುರ್ಭಾವದ ಕೊಳೆಯನ್ನು ಹೋಗಲಾಡಿಸಿಕೊಳ್ಳಲು, ವ್ಯಕ್ತಿಗಳಲ್ಲಿರುವ ಕುರೂಪತೆಯನ್ನು ಮರೆಯಲು ರಸಿಕರಾದವರು ಇವೆರಡೂ ಉಪಾಯಗಳನ್ನು ಅವಲಂಬಿಸುವರು ಮೂರ್ತಿ, ಚಿತ್ರಗಳಂತೆ ವ್ಯಕ್ತಿಗಳು ನಿರ್ಜೀವ ವಸ್ತುಗಳಲ್ಲ. ಮೂರ್ತಿ, ಚಿತ್ರಗಳನ್ನು ಸರಿಯಾದ ಎತ್ತರ, ಬೆಳಕು, ಅಂತರ ಮತ್ತು ಹಿನ್ನೆಲೆಗಳನ್ನು ನೋಡಿಕೊಂಡು ಹೊಂದಿಕೆಯಾಗುವ ರೀತಿಯಲ್ಲಿ ಬೇರೆಯವರು ಇಡುವ ಅಥವಾ ಹಚ್ಚುವ ಅವಶ್ಯಕತೆಯಿರುವಂತೆ ವ್ಯಕ್ತಿಗಳಿಗೆ ಇಲ್ಲ. ವ್ಯಕ್ತಿಯು ತಾನೇ ತನ್ನ ಹಿನ್ನೆಲೆ ಸ್ಥಾನ ಮರ್ಯಾದೆಗಳನ್ನು ನಿರ್ಧರಿಸಿಕೊಂಡು ನಿಂತು ಸಮಾಜ ಮಂದಿರದ ಅಂದವನ್ನು ಅಭಿವೃದ್ಧಿಗೊಳಿಸಲು ನೆರವಾಗುವುದು ಕರ್ತವ್ಯವಾಗಿರುತ್ತದೆ. ಜನಗಳಲ್ಲಿ ಮರ್ಮಜ್ಞತೆ,

ಅಭಿರುಚಿ ಸಾಕಷ್ಟಿಲ್ಲದಿದ್ದಲ್ಲಿ ಬೆಲೆಗೊತ್ತಿಲ್ಲದೆ, ಮೂಲೆಯಲ್ಲಿರಿಸಬೇಕಾದುವು ಮೇಲೆ, ಮೇಲಿರಬೇಕಾದುವು ಮೂಲೆಯಲ್ಲಿ ಬೀಳುವವು. ಆದರೆ ತಮ್ಮ ಅಂದವನ್ನೇ ಅರಿತುಕೊಳ್ಳದ ಅಂದಗೇಡಿಗಳಿಂದ ಸಮಾಜದ ಸೌಂದರ್ಯದ ಹಾನಿಯಾಗುತ್ತದೆ. ತಮ್ಮ ನಿಲುವೆ ಯಾವುದು ಎಂಬುದನ್ನು ನಿರ್ಧರಿಸಿ ಕೊಳ್ಳದೆ ಅಲ್ಲದ ಸ್ಥಾನದಲ್ಲಿ ಕಾಲಿಟ್ಟು ತಾವೂ ಸಂಕಟಪಡುತ್ತಾರೆ. ಇನ್ನು ಉಳಿದವರ ತೊಂದರೆಗೂ ಕಾರಣರಾಗುತ್ತಾರೆ. ಕೊನೆಗೆ ಅವರ ನಿರಾಶೆಯು ಕುತ್ತಿಸಿರು, ನಿಟ್ಟುಸಿರಿನ ಬೀದಿಮಾತುಗಳಿಂದ ಸಮಾಜದ ಪವಿತ್ರವಾಗಿರ ಬೇಕಾದ ವಾತಾವರಣವು ಅಪವಿತ್ರ ದೂಷಿತವಾಗುತ್ತದೆ. ಒರಗು ಮೋರೆ, ಗಂಟು ಮೋರೆ, ರೊಚ್ಚಿನ ಮೋರೆ, ಅಥವಾ ನಿರಾಶೆಯ ನಿಃಸತ್ವ ಸಪ್ಪೆ ಮೋರೆಗಳಿಂದ ನೋಡುವವರ ಹೃದಯಕ್ಕೆ ಬರೆಯೆಳೆ ದಂತೆ ದುಃಖವಾಗುತ್ತದೆ ತಮ್ಮಿಂದ ಈ ಬಗೆಯ ಸಾಮಾಜಿಕ ಅನ್ಯಾಯ ವಾಗುತ್ತದೆಂದು ಅನೇಕರು ಅರಿಯರು. ತಮ್ಮ ಕೊರತೆ, ಕಷ್ಟಗಳನ್ನು ಮರೆತು, ಇನ್ನುಳಿದವರ ಆನಂದದಲ್ಲಿ ಭಾಗಿಗಳಾಗಿ ನಕ್ಕು ಕೆಲೆದು ಹಿಗ್ಗಿನಿಂದ ಇರುವ ಪ್ರಯತ್ನಪಡಲು ಕಲಿಯದೆ ಇರುವುದು ವ್ಯಕ್ತಿಗಳ ಅಸಂಸ್ಕೃತಿಯ ಕುರುಹು.

ತನ್ನ ಅಂದವೆಲ್ಲಿದೆ ? ತನ್ನ ಅರ್ಥವೇನು ? ತನ್ನಲ್ಲಿರುವ ನಿಸರ್ಗ ದತ್ತ ಶಕ್ತಿಗಳು ಯಾವುವು ? ಅವನ್ನು ತನಗೂ ಸಮಾಜಕ್ಕೂ ಉಪಯುಕ್ತ ವಾಗುವಂತೆ ಎಂತು ಬೆಳಸಿಕೊಳ್ಳಬೇಕು ? ಎಂಬ ವಿಚಾರವು ಬೇಗನೆ ತಿಳಿದಷ್ಟು ವ್ಯಕ್ತಿಯ ಹಿತವಿದೆ. ಜ್ಞಾನ ಮತ್ತು ಕ್ರಿಯೆಗಳು ವ್ಯಕ್ತಿವಿಕಾಸಕ್ಕೆ ಮಹತ್ವದ ಸಾಧನಗಳು. ಜ್ಞಾನವು ಕ್ರಿಯೆಯಲ್ಲಿ ಪರಿಣಮಿಸುವುದು. ಕ್ರಿಯೆಯಿಂದ ಅನುಭವ ಬಂದು, ಅನುಭವದಿಂದ ಜ್ಞಾನಪ್ರಾಪ್ತವಾಗು ವುದು. ಕ್ರಿಯೆಯಲ್ಲಿ ರೂಪಾಂತರವಾಗದ ಜ್ಞಾನವು ಜ್ಞಾನವಲ್ಲ. ಜ್ಞಾನದಲ್ಲಿ ಪರಿಣಾಮಗೊಳ್ಳದ ಕ್ರಿಯೆ ಕ್ರಿಯೆಯಲ್ಲ. ಜ್ಞಾನ ಮತ್ತು ಕ್ರಿಯೆಗಳು ಒಂದರೊಳಗೊಂದು ಮಾರ್ಪಡುತ್ತಿರುವುದೆ ಜೀವಂತ ವ್ಯಕ್ತಿಯ ಲಕ್ಷಣ. ಅವನೆ 'ಕ್ರಿಯಾವಂತ'. ಆಡುವುದಕ್ಕೂ ಮಾಡುವುದಕ್ಕೂ ಅಸಂಬದ್ಧತೆಯು ಆತನಲ್ಲಿ ಇರುವದಿಲ್ಲ. 'ನಾನು' (ಇದ್ದೇನೆ) ಎಂಬ ಅರಿವಿನಿಂದೊಡಗೂಡಿ

ಮಾಡುತ್ತಿರುವ ಕೆಲಸದಿಂದ ಅರಿವಿನ ಕ್ಷೇತ್ರವು ವಿಶಾಲವಾಗಿ ವಿಚಾರವು ಬೆಳೆಯುವುದು. ವಿಚಾರವೇ ಪ್ರಗತಿಯ ಮುಖ್ಯ ಸಾಧನ. ವಿಚಾರವೆಂದರೆ ಪ್ರಗತಿ. ವಿಚಾರವೆಂದರೆ ಬರಿಯ ಕಲ್ಪನೆಯಲ್ಲ. ಇದು ಸರಿ ಎಂದು ಮನವರಿಕೆಯಾದ ಮಾತು. ಮನದಲ್ಲಿ ಸಂಪೂರ್ಣ ಒಪ್ಪಿಗೆಯನ್ನು ಪಡೆದ ಮಾತು ವ್ಯಕ್ತಿಯನ್ನು ಸುಮ್ಮನೆ ಇದ್ದಲ್ಲಿಯೆ ನಿಲ್ಲಗೊಡುವುದಿಲ್ಲ ವಿಚಾರವು ಆಚಾರಕ್ಕೆ ಹಚ್ಚುತ್ತದೆ. ಕೃತಿಯನ್ನು ಮಾಡಲು ಮನದಲ್ಲಿ ಸೂಕ್ಷ್ಮವಾಗಿ ಒತ್ತಾಯ ಪಡಿಸುವ ಕಲ್ಪನೆಯೆ ವಿಚಾರ. ವಿಚಾರವು ವ್ಯಕ್ತಿಗೆ ಗತಿದಾಯಕ ಶಕ್ತಿ ಅವ್ಯಕ್ತ ವಿಚಾರದ ವ್ಯಕ್ತರೂಪವೇ ಆಚಾರ ವಿಚಾರವೆಂದರೆ ಪ್ರಗತಿ; ವಿಚಾರವೆಂದರೆ ಮುನ್ನಡೆ. ವಿಚಾರವಂತರು ಇದ್ದಲ್ಲಿಯೇ ಬಿದ್ದುಕೊಂಡಿರಬೇಕೆಂಬ ಸ್ಥಿತಿಪ್ರಿಯರಾಗಿರಲಾರರು. ಪ್ರಗತಿಯಲ್ಲಿ ಆಸಕ್ತಿಯನ್ನು ನಿಃಸಂದಿಗ್ಧ ರೀತಿಯಲ್ಲಿ ವ್ಯಕ್ತಪಡಿಸುವ ಈ ಪದಗಳು (ಸು)ಸಂಸ್ಕೃತರ ಪ್ರಾಗತಿಕ ಮನೋವೃತ್ತಿಯ ನಿದರ್ಶಕವಾಗಿಲ್ಲವೇ ?

ವೈಶಿಷ್ಟ್ಯ ಪೂರ್ಣವಾದುದೆಂದೇ ಅದು ವ್ಯಕ್ತಿ ಆದರೆ ವೈಶಿಷ್ಟ್ಯಕ್ಕೂ ವಿಚಾರಕ್ಕೂ ಎಣ್ಣೆ–ಸೀಗೆ ! ವಿಚಾರವು ವೈಶಿಷ್ಟ್ಯವನ್ನು ಕಡಿಮೆ ಮಾಡುತ್ತದೆ; ತೊಳೆದೂ ಬಿಡುತ್ತದೆ ! ದಿವ್ಯ ಜ್ಞಾನಿಗಳಿಗೆ ತಮ್ಮ ವ್ಯಕ್ತಿ ವೈಶಿಷ್ಟ್ಯವನ್ನು ಮನಸಾ ಉಳಿಸಿಕೊಂಡು ಅದನ್ನು ಜನರೆದುರು ಪ್ರದರ್ಶಿಸುವಲ್ಲಿ ಅಷ್ಟು ಸಂತೋಷವಿಲ್ಲ. ಶ್ರುತಿಗಳ ದ್ರಷ್ಟಾರರು, ಸ್ಮೃತಿಗಳ ಲೇಖಕರು, ಮಹಾಕಾವ್ಯಗಳ ನಿರ್ಮಾತೃಗಳು ಯಾರೂ ತಮ್ಮ ವ್ಯಕ್ತಿತ್ವದ ಪ್ರದರ್ಶನಕ್ಕೆ ಪ್ರವೃತ್ತರಾದುದು ಕಂಡುಬರುವುದಿಲ್ಲ. ಅವರನ್ನು ಕಲ್ಪನೆಯಿಂದಲೇ ಚಿತ್ರಿಸಿಕೊಳ್ಳಬೇಕು, ಇಂದು ! ಭಾರತೀಯ ಸಂಸ್ಕೃತಿಯಲ್ಲಿ ಮುಖ್ಯವಾಗಿ ಅಧ್ಯಾತ್ಮಕ್ಕೇ ಪ್ರಾಧಾನ್ಯವಿದ್ದುದರಿಂದ ಅದರ ವಿಚಾರ ಪ್ರಣಾಲಿಯಲ್ಲಿ ವ್ಯಕ್ತಿತ್ವಕ್ಕೆ ಇಂಬು ಇದ್ದಿಲ್ಲ. ವ್ಯಕ್ತಿತ್ವವನ್ನು ಕೊಂದು ಬಿಟ್ಟರೆ, ವೈಶಿಷ್ಟ್ಯಕ್ಕೆ ಮಹತ್ವವು ಇಲ್ಲದಾದರೆ ಸಾಮಾನ್ಯರಿಗೆ ತಾನು ಬೆಳೆಯಬೇಕೆಂಬುದರೊಳಗಿನ ಆಸ್ಥೆಯು ಕುಗ್ಗುತ್ತದೆ. ತಾನು, ತನ್ನದು ಎಂಬ ಭಾವವೂ ಸ್ಪರ್ಧೆಯೂ ವ್ಯಕ್ತಿವಿಕಾಸಕ್ಕೆ ಅವಶ್ಯಕವಾದ ಕಾವು ಕೊಡುವವು ಆದರೆ ವಿಚಾರವು ವಿಕಾಸವಾದಂತೆ 'ತಾನು' ಎಂಬ ಭಾವದ

ಟೊಳ್ಳುತನದ ಮನವರಿಕೆಯಾಗಿ ವೈಶಿಷ್ಟ್ಯದ ಆಕಾಂಕ್ಷೆಯು ಉಳಿಯ ದಾಗುವುದು.

ಈ ಎರಡು ಶಕ್ತಿಗಳ ಸಂಘರ್ಷಣವು ತನ್ನಲ್ಲಿ ನಡೆದುದು ವ್ಯಕ್ತಿಗೆ ಅನೇಕ ಬಾರಿ ಅನುಭವಕ್ಕೆ ಬರುತ್ತದೆ. ವಿಚಾರವು ವ್ಯಕ್ತಿಗೆ ಮುನ್ನಡೆ ಯಲು ಒಳಗಣಿಂದ ಚುಚ್ಚುತ್ತಿರುತ್ತದೆ ಆದರೆ ಸ್ವಾರ್ಥ, ವೈಶಿಷ್ಟ್ಯಗಳು ಆತನನ್ನು ಇದ್ದಲ್ಲಿಯೇ ಉಳಿಯಲು ಬಿಗಿದು ಹಿಡಿಯುತ್ತವೆ. ಸ್ವ-ಅರ್ಥದ ವಿಶಾಲವಾದ ಅರ್ಥ, ಅನುಭವಗಳು ಹಿರಿಮೆ ಹೆಚ್ಚಳದ ಕಲ್ಪನಾಚಿತ್ರ ಗಳನ್ನು ವ್ಯಕ್ತಿಯ ಮುಂದೆ ಹಿಡಿದು ಅತ್ತಕಡೆಗೆ ಅದನ್ನು ಆಕರ್ಷಿಸುತ್ತವೆ. ಆದರೆ ಹೀಗೆ ಹೆಚ್ಚಳಗೊಳ್ಳುವಲ್ಲಿ 'ತನ್ನದು' ಎಂಬುದೇ ಉಳಿಯದೆ ಎಲ್ಲರಲ್ಲಿ ತಾನು ಬೆರೆತು ಹೋಗುವ ಭೀತಿಯನ್ನೂ ಸ್ವಾರ್ಥ-ವೈಶಿಷ್ಟ್ಯಗಳು ಮುಂದೊಡ್ಡುವುವು. ಈ ದ್ವಂದ್ವದಲ್ಲಿ ಸಾಮಾನ್ಯ ವ್ಯಕ್ತಿಯು ನುಗ್ಗು ನುಸಿಯಾಗುತ್ತದೆ. ಸ್ವಾರ್ಥಕ್ಕೆ ಬಾಧೆಬರುವುದನ್ನು ಕಂಡು ವ್ಯಕ್ತಿಭಾವವು ಜಾಗೃತವಾಗಿ 'ಸ್ವ'ದ ಅರ್ಥವು ವಿಸ್ತೃತವಾಗುವುದನ್ನು—ವಿಚಾರವನ್ನು ವಿರೋಧಿಸಲು ಅಣಿಯಾಗುವುದು. ಆದುದರಿಂದ ವೈಶಿಷ್ಟ್ಯಕ್ಕೆ ಪ್ರಾಧಾನ್ಯ ವೀಯುವ ವ್ಯಕ್ತಿಯು ವಿಚಾರದ ವೈರಿ. ವಿಚಾರವನ್ನು ಅಲ್ಲ;-ಕಲ್ಪನೆ ಗಳನ್ನು ತನ್ನ ಸ್ವಾರ್ಥ ವೈಶಿಷ್ಟ್ಯಗಳ ಮಂಡನೆಗೆ ಉಪಯೋಗಿಸುವನೇ ಹೊರತು (ಶುದ್ಧ) ಜ್ಞಾನ ಜಿಜ್ಞಾಸುವಾಗಿ ಪ್ರ-ಗತಿಗಾಗಿ ಅಲ್ಲ

ವ್ಯಕ್ತಿತ್ವವು ಸ್ಥಿತಿಯ ಸೂಚಕವಾಗಿದೆ. ವ್ಯಕ್ತಿತ್ವ, ವೈಶಿಷ್ಟ್ಯ, ಸ್ವಾರ್ಥ, ಸ್ವಭಾವ ಇವೆಲ್ಲವುಗಳಲ್ಲಿ ಸ್ಥಿತಿಸ್ಥಾಪಕ ಗುಣವುಂಟು ಆದರೆ ವಿಚಾರವು ಸ್ಥಿತಿಗೆ ವಿರೋಧಿ! ವಿಚಾರದ ಬೆಂಬತ್ತಿದರೆ ಅಜ್ಞಾತ ಹೊಸ ಪರಿಸ್ಥಿತಿಗೆ ಕೊಂಡೊಯ್ಯುವುದು ನಿಶ್ಚಿತ. ವಿಚಾರ ಎಂದರೆ ಮುನ್ನಡೆಯಲ್ಲಿ ಈ ಗಂಡಾಂತರವು ಯಾವಾಗಲೂ ಇದ್ದೇ ಇದೆ. ಒಂದು ಸ್ಥಿತಿಯಲ್ಲಿ ಇದ್ದವರು, ಅಥವಾ ಒಂದು ಸ್ಥಿತಿಗೆ ಬಂದವರು—ಎಂದರೆ 'ಸ್ಥಿತಿವಂತ'ರು ಅಜ್ಞಾತ ಪರಿಸ್ಥಿತಿಗೆ ಒಯ್ಯುಬುದ್ಧಿಗೂ ವಿಚಾರಕ್ಕೂ ಯಾವಾಗಲೂ ಹೆದರು ವರು ಸ್ವತಂತ್ರವಿಚಾರ, ನವೀನ ದೃಷ್ಟಿಗಳನ್ನು ವಿರೋಧಿಸುವರು. ಹೀಗೆ ವ್ಯಕ್ತಿಯ ಸ್ಥಿರ ಮತ್ತು ಚರಬಿಂದುಗಳಲ್ಲಿ—ವೈಶಿಷ್ಟ್ಯ, ಸ್ವಭಾವ, ಸ್ವಾರ್ಥ ಗಳು ಒಂದೆಡೆಗೆ ಮತ್ತು ವಿಚಾರ,ಸೌಂದರ್ಯಗಳು ಇನ್ನೊಂದೆಡೆಗೆ ಇವೆರಡರ

ಎಳೆದಾಟವು ನಡೆದದ್ದೂ ನಡೆದದ್ದೆ! ಇವೆರಡರಲ್ಲಿ ಯಾವುದಕ್ಕೆ ಗೆಲುವೊ ಅದರ ಮೇಲೆ ಮಾನವನ ಬೆಲೆ, ಆತನ ಸಮಾಜದ ಬೆಲೆ ಅವಲಂಬಿಸಿದೆ.

ಸ್ಥಿರಬಿಂದುವಿನ ಆಧಾರ ನೆಲ. ಭೂಮಿಯಲ್ಲಿ ಬೇರ್ವರಿದು ದೃಢವಾಗಬೇಕೆಂಬುದು ಇದರ ಸ್ವಭಾವ. ಚರಬಿಂದುವಿನ ಗತಿ ಮುಗಿಲಿನತ್ತ ಸುತ್ತುಮುತ್ತು ಹಬ್ಬುವುದು, ಮುಂದುವರಿಯುವುದು ಇದರ ಸ್ವಭಾವ. ಒಂದರದು ಅಧೋಗತಿ; ಇನ್ನೊಂದರದು ಊರ್ಧ್ವಗತಿ. ತನ್ನತನವನ್ನು ಉಳಿಸಿಕೊಳ್ಳಲು ವ್ಯಕ್ತಿತ್ವವು ನೆರವಾಗುತ್ತದೆ. ಹೀಗೆ ಹಲವರೊಡನೆ ಬೆರೆತು, ವಿಶಾಲವಾದ ಅನುಭವಾನಂದ ಹೊಂದಲು ವಿಚಾರವು ಸಹಕಾರಿಯಾಗುತ್ತದೆ. ವ್ಯಕ್ತಿತ್ವದಲ್ಲಿ ಭೂ-ತತ್ವವಿದ್ದರೆ, ವಿಚಾರದಲ್ಲಿ ಆಕಾಶತತ್ವವಿದೆ. ಮೊದಲನೆಯದು ಅನ್ನಮಯಕೋಶಸ್ಥಜೀವ; ಎರಡನೆಯದು ಮನೋಮಯಕೋಶಸ್ಥ ಚೈತನ್ಯ. ಮೊದಲನೆಯದು ವ್ಯಕ್ತಿ; ಎರಡನೆಯದು 'ಪುರುಷ'.

ವಿಕಾಸಗೊಂಡ ವ್ಯಕ್ತಿಯೆ 'ಪುರುಷ'* 'ಪುರುಷ' ಶಬ್ದವು ಋಗ್ವೇದ ಕಾಲದಷ್ಟು ಪ್ರಾಚೀನ! ಅಂದಿನಿಂದಲೂ ಈ ವಿಶಾಲಾರ್ಥವು ಅದರಲ್ಲಿ

---

* ಪುರುಷನು ಎಂದರೆ ಗಂಡಸು ಎಂದು ಅರ್ಥವು ಧ್ವನಿತವಾಗುತ್ತದೆ. ಮನುಷ್ಯನು, ಮಾನವನು, ಪುರುಷನು ಕೇವಲ ಗಂಡಸರೆಂದೇ ಬಗೆಯುವುದು ಅನ್ಯಾಯ. ಹೆಂಗಸರಿಗೆ ಅಪಮಾನ. ಏಕೆಂದರೆ ಮನುಷ್ಯನು ಎನ್ನುವದರಿಂದ ಹೆಂಗಸರು ಮನುಷ್ಯರಲ್ಲವೆಂದರ್ಥವಾಗುವ ಹಾಗಿದೆ. ಪುರುಷನು ಎನ್ನುವದರಿಂದ ಹೆಂಗಸರು ಪೌರುಷ ಎಂದರೆ ಸತ್ವವಿಹೀನರೆಂಬ ಕಲ್ಪನೆಯಾಗುವುದು. ಸ್ತ್ರೀಯರು ಯಾವಾಗಲೂ ಅನ್ನಮಯಕೋಶದಲ್ಲಿಯೇ ಇರತಕ್ಕ ಗೃಹಿಣಿಯರು. ಮನೋಮಯಕೋಶದ ವಿಕಾಸವು ಅವರಲ್ಲಿ ಆಗುವುದಿಲ್ಲ. ಎಂಬ ಗ್ರಹಿಕೆಗಳಿಗೆ ಒಂದು ಕಾಲಕ್ಕೆ ಆಸ್ಪದವಿತ್ತು. ಆದರೆ ಈಗ ಯುಗಪಲ್ಲಟವಾಗಿದೆ. ಈಗ ಧೀಮಂತರಾದ ಸತ್ವಶಾಲಿಗಳಾದ ಹೆಂಗಳೆಯರು ತಮ್ಮ ಪೌರುಷದಿಂದ ಖ್ಯಾತಿಯನ್ನು ಸಂಪಾದಿಸುತ್ತಿದ್ದಾರೆ. ಇಂತಹ ಕಾಲದಲ್ಲಿ ಮನುಷ್ಯನು. ಪುರುಷನು ಎಂಬ ಮಾತಿನ ರೀತಿ ಇನ್ನೂ ಬದಲಾಗದಿರುವುದು, ಭಾಷೆಯಲ್ಲಿ ಔಚಿತ್ಯಕ್ಕೆ ಗಮನಕೊಡದಿರುವ ಜನಗಳೆಂಬ ಆರೋಪಕ್ಕೆ ಆಸ್ಪದವನ್ನು ಕೊಡದೆ ಇರದು. ಭಾಷೆಯೊಳಗಿನ

(ಮುಂದಿನ ಪುಟಕ್ಕೆ)

ಅಭಿಪ್ರೇತವಾಗಿದೆ. ವ್ಯಕ್ತಿತ್ವಕ್ಕೆ ಮಿತಿಯಿದೆ. ವೈಶಿಷ್ಟ್ಯವು ಏಕಾಂಗಿಕತೆಯ ಸೂಚಕ. ವ್ಯಕ್ತಿ ಎರಡನ್ನು ಅರಿಯದು. ವ್ಯಕ್ತಿಗೆ ಅನ್ನವೇ ದೇವರು. ಪುರುಷ, ಮನಸಿನ ಉಪಾಸಕ. ಮನಸ್ಸು ಬಹುಮುಖ; ಅನಂತಮುಖ. ಉಪಾಸ್ಯದ ಗುಣ. ಉಪಾಸಕನಲ್ಲೂ ಬರುವುದು ನಿತ್ಯನಿಯಮ. ಆದಕಾರಣ ಪುರುಷ ಬಹು ಸ್ವರೂಪಿ; ಅನಂತರೂಪಿ ವ್ಯಕ್ತಿಯು ತನ್ನ ವ್ಯಕ್ತಿತ್ವವನ್ನು ಬಿಡಲರಿಯದು. ಅದರಿಂದ ಅದು ಇನ್ನೊಬ್ಬರೊಡನೆ ಬೆರೆಯಲೂ ಆರದು ಆದರೆ ಪುರುಷ ಸರ್ವರೂಪಿ. ಆದುದರಿಂದ ಅವರಂತಾಗಿ ಯಾರೊಡನೆಯೂ ಕೂಡಬಲ್ಲ. ಈಕಾರಣ ವ್ಯಕ್ತಿ ವಿಶಿಷ್ಟಲಿಂಗಿ; ಪುರುಷ ಸರ್ವಲಿಂಗಿಯಾಗಿಯೂ ಅ-ಲಿಂಗಿ ಅಲಿಂಗಿ ಎಂದ ಮಾತ್ರಕ್ಕೆ ಪೌರುಷವಿಹೀನ ನಪುಂಸಕವಲ್ಲ; ಸರ್ವಶಕ್ತವೆಂಬುದರ ಸೂಚಕ. ವಿಶ್ವರೂಪ ತಾಳುವ ಸಾಮರ್ಥ್ಯವು ನಪುಂಸಕರಿಗೆ ಸಾಧ್ಯವೆ? ಅಭಿಮಾನ, ಅಹಂಕಾರ ವ್ಯಕ್ತಿಯ ಗುಣ. ತಾನು, ತನ್ನ ವೈಶಿಷ್ಟ್ಯ ಎಂಬ ಅಭಿಮಾನ, ಅಹಂಕಾರವಿಲ್ಲದೆ ವ್ಯಕ್ತಿತ್ವವು ಉಳಿಯಲಾರದು. ಅಹಂಕಾರದ ಅಭಿಮಾನ ದೇವತೆ 'ಲಿಂಗ'. ವಿಶಿಷ್ಟಲಿಂಗಿ ಎಂಬ ಅರಿವಿನಲ್ಲಿ ಹುದುಗಿಕೊಂಡಿರುವವರೆಲ್ಲ

---

(ಹಿಂದಿನ ಪುಟದಿಂದ)

ಕೊರತೆಗಳನ್ನು ಕಡಿಮೆ ಮಾಡಿಕೊಳ್ಳುವ ಪ್ರಯತ್ನಗಳು ನಡೆಯದಿರುವುದು, ಆ ಭಾಷೆಯನ್ನಾಡುವ ಜನರಲ್ಲಿ ವಿಚಾರಿಗಳ ಅಭಾವವಿರುವುದರ ಕುರುಹು. 'ನು' ಪುಲ್ಲಿಂಗವಾಚಕ; 'ಳು' ಸ್ತ್ರೀಲಿಂಗ ವಾಚಕ; ಹಾಗಾದರೆ ಇವೆರಡರ ನಡುವಣ 'ಲು' ಪುಂ ಸ್ತ್ರೀ ಉಭಯಲಿಂಗ ಸೂಚಕವೆಂದು ಗ್ರಹಿಸಲು ಬಾಧಕವೇನು? ಶಿಕ್ಷಕ, ಅಧ್ಯಕ್ಷ ಮೊದಲಾದ ಕಡೆಗಳಲ್ಲಿ ಅಡಿಗಡಿಗೆ ಬರುವ ತೊಂದರೆಯೂ ಇಲ್ಲದಾಗುವುದು ಪುರುಷಲು, ಅಧ್ಯಕ್ಷಲು, ಶಿಕ್ಷಕಲು ಎಂದರೆ ಗಂಡಸು ಅಥವಾ ಹೆಂಗಸು ಎಂಬ ಉಭಯಾರ್ಥವೂ ಅಲ್ಲಿ ಸೂಚಿತವಿದೆಯೆಂಬ ಸಂಕೇತವು ಮಾನ್ಯವಾದಲ್ಲಿ ಭಾಷೆಯಲ್ಲಿ ಅರ್ಥವಾಹಕ ಶಕ್ತಿ ಇನ್ನು ಸ್ವಲ್ಪ ಹೆಚ್ಚಿಸಿದಂತಾಗುವುದು ಆದರೆ ತಮಗಾದ ಅನ್ಯಾಯವನ್ನು ವಿರೋಧಿಸಿ, ಭಾಷೆಯಲ್ಲಿ ತಕ್ಕ ಮಾರ್ಪಾಟುಗಳನ್ನು ಸೂಚಿಸಿ ಅವನ್ನು ಬಳಕೆಯಲ್ಲಿ ತರುವ ಪೌರುಷವನ್ನು ವ್ಯಕ್ತಪಡಿಸತಕ್ಕ ಹಕ್ಕು ಹೆಣ್ಣುಮಕ್ಕಳದು ತಾನೆ? ಆದರೂ ಹೀಗೆ ಮಾಡಬಹುದೆಂದು ಸೂಚಿಸಲು ನನ್ನೊಳಗಿನ ಪುರುಷ ಹೇಳುತ್ತಿದ್ದರೆ, ನನ್ನೊಳಗಿನ ವ್ಯಕ್ತಿ ಅವರ ಹಕ್ಕನ್ನು ಕಸಿದುಕೊಂಡ ಆಕ್ಷೇಪಣೆಗೆ ಗುರಿಯಾಗದಿರಲು ವಿಧಿಸುತ್ತಿದೆ

ಎಂದೆಂದೂ ವ್ಯಕ್ತಿಗಳೇ. ಪುರುಷನು ಸುಜ್ಞ; ನಿರಹಂಕಾರಿ. ಅಥವಾ ನಿರಹಂಕಾರಿಯಲ್ಲದವನು ಪುರುಷನಲ್ಲ. ಈ ಕಾರಣದಿಂದ ಪುರುಷ ನಿಗೆ ವೈಶಿಷ್ಟ್ಯವಿಲ್ಲ. ವಿಶಿಷ್ಟಲಿಂಗವಿಲ್ಲ ಬಹುರೂಪಿ; ಸರ್ವರೂಪಿ; ಅನಂತಸ್ವರೂಪಿ. ಅನ್ನಮಯ ದೇಹದ ವ್ಯಕ್ತಿ ಭೋಗಿ. ಇದರದೊ ಶರೀರತೃಪ್ತಿ. ಆದುದರಿಂದ ಅಧೋರೇತ. ಮನೋಮಯ ಶರೀರಿ ಪುರುಷ. ದೃಷ್ಟಿವಿನ್ಯಾಸದಿಂದಲೇ ತೃಪ್ತ. ಮನಸ್ತೃಪ್ತ. ಆದಕಾರಣ ಊರ್ಧ್ವರೇತ.

ಸಮಾಜದೊಡನೆ ಬರುವ ಸಂಬಂಧದಲ್ಲಿ ಅ-ಖಂಡವಾಗಿರುವ ವ್ಯಕ್ತಿಯು ನಾನಾ ಮುಖವಾಗಿ ಹೆಚ್ಚುವುದಕ್ಕೆ ಆರಂಭವಾಗುವುದು. ಹೆಚ್ಚುವ ಕ್ರಿಯೆಯನ್ನು ಒಂದು ನಿಟ್ಟಿನಿಂದ ನಿರೀಕ್ಷಿಸಿದರೆ ಹೆಚ್ಚಾಗು ಎಂದರೆ ಅಭಿವೃದ್ಧಿಹೊಂದು, ವಿಕಾಸವಾಗು, ವಿಸ್ತಾರವಾಗು ಎಂಬ ಅರ್ಥದ ಅನುಭವ ಬರುವುದು; ಇನ್ನೊಂದು ನಿಟ್ಟಿನಿಂದ ನೋಡಿದರೆ ಹೆಚ್ಚುವುದು ಹೆಚ್ಚಲ್ಪಡು ತ್ತದೆ; ಹೆಚ್ಚಲ್ಪಡದೆ, ಖಂಡವಾಗದೆ ಅಖಂಡವಾಗಿಯೆ ಉಳಿಯುವ ವಸ್ತು ವಿಗೆ ಹೆಚ್ಚಿತೆಂದು ಹೇಳುವುದು ತಪ್ಪು. ಆದುದರಿಂದ ಹೆಚ್ಚು ಎಂಬುದಕ್ಕೆ, ಮೊದಲಿನ ಹಿರಿದಾಗು ಎಂಬುದಕ್ಕೆ ತೀರ ವಿಪರೀತವಾದ ಕಿರಿದಾಗು ಎಂಬ ಅರ್ಥವಿದ್ದುದೂ ಕಂಡುಬರುವುದು! ಒಂದರಲ್ಲಿಯೇ ಪರಸ್ಪರ ವಿರುದ್ಧಾರ್ಥ! ಅದು ಹೆಚ್ಚಿತು, ಎಂದರೆ ವೃದ್ಧಿಹೊಂದಿತು ಎಂಬರ್ಥದೊಡನೆ ತುಂಡಾಯ್ತು ಎಂಬ ಭಾವವೂ ಅದರಲ್ಲುಂಟು. ವಾಸ್ತವತೆಯ, ಸತ್ಯಾಂಶದ ಎರಡೂ ಬದಿಗಳ, ಕಂನಾಡವರ ಅನುಭಾವವನ್ನು ಇಲ್ಲಿ ಮನಗಾಣಬಹುದು. ಸಮಾಜದೊಡನೆ ಬರುವ ಸಂಪರ್ಕದಲ್ಲಿ ವ್ಯಕ್ತಿತ್ವವು ಹೆಚ್ಚುವುದು. ಸ್ವಾರ್ಥವು ತುಂಡರಿಸಲ್ಪಟ್ಟು 'ಸ್ವ'ದ ಅರ್ಥವು ವಿಸ್ತಾರ ವಾಗುವುದು. ವ್ಯಕ್ತಿಯು ವಿಕಾಸಗೊಳ್ಳುವುದು. ತಾನೇತಾನಾಗಿ ಇದ್ದ ವ್ಯಕ್ತಿಯು ಗೆಳೆತನದ ಪ್ರೀತಿಯಿಂದ ಹಿಗ್ಗಿ ಹಲವರೊಡನೆ ಒಂದಾಗಲು ಕಲಿಯುವುದು. ಕೈಹಿಡಿದವರೊಡನೆ ತನ್ಮಯತೆಯು ಅನುಭವ ಗೊಳ್ಳುವುದು. ಸೇವಕ, ಒಡೆಯ, ನಾಗರಿಕ, ಧಾರ್ಮಿಕ, ಸುಧಾರಕ, ಸನಾತನಿ, ದೇಶಾಭಿಮಾನಿ, ಮಾನವ್ಯದ ಉಪಾಸಕ ಎಂಬಿವೇ ಮೊದಲಾದ ನಿಲುಮೆಗಳಲ್ಲಿ ವ್ಯಕ್ತಿಯು ವಿಕಾಸಗೊಂಡ ಹಾಗೆ ಪೌರುಷದ ಸಾಕ್ಷಾತ್ಕಾರ ವಾಗುವುದು. ಇಂತಹ ಪೌರುಷವನ್ನುಳ್ಳವರೇ ಪುರುಷರು. ಹುಟ್ಟಿನೊಡನೆ

ನಾನು ಇದ್ದೇನೆ) ಎಂಬ ಅರಿವು ಮಾತ್ರ ಬರುವುದು. ಸಮಾಜ ಸಂಪರ್ಕದಿಂದ ನಾನು ಎಂಬುದರ ವಿಸ್ತಾರವು ಎಷ್ಟು, ಅದರ ಅರ್ಥವೇ ನೆಂಬುದು ಪೌರುಷದಲ್ಲಿ ಅನುಭವಕ್ಕೆ ಬಂದು, ವ್ಯಕ್ತಿಯು ಪುರುಷವಾಗು ವಲ್ಲಿ ಹಿಗ್ಗುಗೊಳ್ಳುವುದು.

ಮಾನವರಲ್ಲಿ ಕಾಣಿಸಿಕೊಳ್ಳುವ ಚೈತನ್ಯವು ಅನಂತಶಕ್ತಿಯ ಅಂಶ. ಅದು ವಿಕಾಸಗೊಳ್ಳಲು ಅರಿವಿನಿಂದೊಡಗೂಡಿದ ಸಾಮಾಜಿಕ ಸಂಬಂಧಗಳೇ ಮುಖ್ಯವಾದ ಸಾಧನ. ಈ ಸಾಧನವನ್ನು ಸರಿಯಾಗಿ ಉಪಯೋಗಿಸಿ ಕೊಳ್ಳದವರ ಅಂತಃಶಕ್ತಿಗಳು ಅವು ಮೂಲದಲ್ಲಿ ಎಷ್ಟೇ ಅಗಾಧವಾದ ಸಾಮರ್ಥ್ಯಯುಕ್ತವಾಗಿರಬಹುದಾದರೂ ಸುಪ್ತಸ್ಥಿತಿಯಲ್ಲಿಯೇ ಉಳಿಯು ತ್ತವೆ. ಬರಿ ನಾನು (ಇದ್ದೇನೆ) ಎಂಬುದರ ಮಿಕ್ಕಿ ಆ ಅರಿವಿನ ಪ್ರಗತಿ ಯಾಗಲಾರದು. ಅಂತರ್‌ಜ್ಞಾನ, ಕಣ್ಣು ಮುಚ್ಚಿ ಎಲ್ಲವನ್ನೂ ಅರಿವಶಕ್ತಿ ಮುಂತಾದವುಗಳನ್ನು ಮನೆ-ಮಠ-ಆಶ್ರಮಾದಿಗಳಲ್ಲಿ ಕಟ್ಟೇಕಾಂತದೊಳಗೆ ಒಬ್ಬರೇ ಕುಳಿತು ಪಡೆದುಕೊಳ್ಳಲು ಸಾಧ್ಯವೆಂದು ಕೆಲವರ ಗ್ರಹಿಕೆ ಯಾಗಿದೆ. ಸಾಮಾಜಿಕ ಸಂಪರ್ಕದಿಂದಲ್ಲದೆ ಈ ಶಕ್ತಿಗಳು ಬೆಳೆಯು ವುದು ಅಸಂಭವ. ಈಗ ಎಷ್ಟೇ ಏಕಾಂತದಲ್ಲಿದ್ದರೂ ಪೂರ್ವಾಶ್ರಮ ದಲ್ಲಿ ಅವರು ಸಂಗ್ರಹಿಸಿದ, ಅಥವಾ ಪ್ರಾಪ್ತವಾದ (ಸಾಮಾಜಿಕ ಸಂಬಂಧದಿಂದ ಬಂದ) ಜ್ಞಾನವು ಅವರಲ್ಲಿ ಇರುತ್ತದೆ. ಏಕಾಂತ ದಲ್ಲಿದ್ದೂ ಗ್ರಂಥರೂಪದಲ್ಲಿ ಸಮಾಜದ (ಜ್ಞಾನ) ಲಾಭವನ್ನು ಹೊಂದುತ್ತಿರುತ್ತಾರೆ. ಶಿಷ್ಯಾದಿಗಳ ಸಂಬಂಧದಿಂದ ಅವರಲ್ಲಿರುವ ವಿಚಾರ ಶಕ್ತಿಗೆ ಚಾಲನೆದೊರೆಯುತ್ತಿರುತ್ತದೆ. ಇವಾವ ಅನುಕೂಲತೆಗಳನ್ನೂ ಪಡೆಯದೆ ಹುಟ್ಟಿನಿಂದ ಅಡವಿಯಲ್ಲಿಯೆ ಇದ್ದುಬಿಟ್ಟರೆ ಭಾಷೆ (ಮಾತು) ಬರುವುದು ಕೂಡ ಸಾಧ್ಯವಿಲ್ಲ. ಮಾನವನ ಮನೋವಿಕಾಸಕ್ಕೆ ಸಾಮಾಜಿಕ ಸಂಪರ್ಕವೇ ಮುಖ್ಯಸಾಧನ.

ಪ್ರತಿಯೊಂದು ವ್ಯಕ್ತಿಯೂ ಒಂದೊಂದು 'ಯ+ಕ್ಷ' ಎಂದರೆ ಅಜ್ಞಾತ ದಿವ್ಯಶಕ್ತಿ. ಆ ವ್ಯಕ್ತಿಯಲ್ಲಿರುವ 'ಅರ್ಥ'ದ ಬೆಲೆಯು ಅದರ ಸಾಮಾಜಿಕ ವ್ಯವಹಾರಗಳಲ್ಲಿ ಅನುಭವಕ್ಕೆ ಬರುವುದು 'ಯ'ದ

ಬೆಲೆಯು ಆ ವ್ಯಕ್ತಿಯ ಪ್ರಯತ್ನ; 'ಕ್ಷ'ದ ಬೆಲೆಯು ಅದು ಬೆಳೆವ ಸಾಮಾಜಿಕ ಸನ್ನಿವೇಶ. ಆದುದರಿಂದ ಯ+ಕ್ಷ ವ್ಯಕ್ತಿ)=ಸ್ವಪ್ರಯತ್ನ+ಸಾಮಾಜಿಕ ಸನ್ನಿವೇಶ ಸ್ವಪ್ರಯತ್ನಗಳು ಎಂತಹವು, ಮತ್ತು ಎಂತಹ ಸಾಮಾಜಿಕ ಪರಿಸ್ಥಿತಿಯನ್ನು ಎದುರಿಸಬೇಕಾಯ್ತು (ಸಾಮಾಜಿಕ ಎಂಬುದರಲ್ಲಿ ಮನೆತನದ ಆವರಣವೂ ಒಳಗೊಳ್ಳುವುದು), ಎಂಬ ಸಂಗತಿಗಳು ತಿಳಿದರೆ ವ್ಯಕ್ತಿಯ ಬೆಲೆಯನ್ನು ನಿರ್ಧರಿಸಲು ಬಹುದಾಗಿದೆ 'ಸೈಕೊ-ಡೈನಾಮಿಕ್ಸ' ಎಂಬುದು ಈಗ ಈ ದಿಕ್ಕಿನಲ್ಲಿ ವಿವಿಧ ಪ್ರಯೋಗಗಳನ್ನು ನಡೆಸಿದೆ. ಪ್ರತಿಯೊಂದು ವ್ಯಕ್ತಿಯ ಸ್ವಪ್ರಯತ್ನದ ರೀತಿ ಮತ್ತು ಯೋಗ್ಯತೆಗಳಲ್ಲಿ ವ್ಯತ್ಯಾಸವಾಗುವುದು ಅನಿವಾರ್ಯ. ಅದರಂತೆ ಅದು ಎದುರಿಸಬೇಕಾದ ವಾತಾವರಣ (ಆನುವಂಶಿಕ ಸಂಸ್ಕಾರ; ತಂದೆ, ತಾಯಿ, ಬಳಗದವರ ಸಾಂಸ್ಕೃತಿಕ ಮಟ್ಟ; ಹೊರಗಣ ಅದರ ಜಾತಿ ಮತದ ವಿಚಾರಗಳು; ದೇಶದ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿ. ಜಾಗತಿಕ ಘಟನೆ ಮುಂ.) ಒಂದೊಂದು ವ್ಯಕ್ತಿಗೂ ಬೇರೆಬೇರೆಯಾಗಿರುತ್ತದೆ ಆದಕಾರಣ ವ್ಯಕ್ತಿ ವ್ಯಕ್ತಿಗಳ ಬೆಲೆ ಭಿನ್ನ. ಎಲ್ಲರ ಬೆಲೆ ಸಮಾನ ಬಗೆಯುವುದು ಅಶಾಸ್ತ್ರೀಯ. ಅವ್ಯವಹಾರ್ಯ. ತಾನು ಪರಮೋನ್ನತಿಯನ್ನೈದಬೇಕೆಂದು ಕಲ್ಪಿಸಿಕೊಂಬ ಗುರಿಯೂ ಕೂಡ ಸ್ಥೂಲವಾಗಿ ಒಂದೇ ಎನಿಸಿದರೂ ಸೂಕ್ಷ್ಮದಲ್ಲಿ ವ್ಯಕ್ತಿ ವ್ಯಕ್ತಿಗೂ ಭಿನ್ನವಾಗುವುದು ಆದಕಾರಣ ಸಮತಾವಾದವು ಕೇವಲ ಆದರ್ಶವಲ್ಲದೆ ವ್ಯವಹಾರವಲ್ಲ. ಆದರ ಧ್ವನ್ಯಾರ್ಥಕ್ಕೆ ಮಹತ್ವವೇ ಹೊರತು, ಶಬ್ದಶಃ ಅರ್ಥಮಾಡಿದಲ್ಲಿ ವಾಸ್ತವತೆಯ ಬಂಡೆಗಲ್ಲ ಮೇಲೆ ಆ ವಿಚಾರದ ಹಡಗವು ಅಪ್ಪಳಿಸಿ ಕಪ್ಪಕ್ಕೀಡಾಗಬೇಕಾಗುವುದು ನಿಶ್ಚಿತ. ಮಾಯಾ ಅದ್ವೈತದ ತತ್ವಜ್ಞಾನವಿದ್ದಂತೆ 'ಭಾವಾದ್ವೈತಂ ಸದಾ ಕುರ್ಯಾತ್ ಕ್ರಿಯಾದ್ವೈತಂ ನ ಕದಾಚನ' ಎಂಬ ಈ ಮಾರ್ಗದವರ ಅನುಭವದ ಲಾಭವನ್ನು ರಾಜಕೀಯ ಸಾಮಾಜಿಕ ಅದ್ವೈತಿಗಳೂ ಪಡೆಯಬಹುದಾಗಿದೆ. ಮತ್ತೆ ಆ ಹಿಂದಿನ ತಪ್ಪೇ ಮುಂದೆ ಆಗಲಿಕ್ಕಿಲ್ಲ

ದೇಹರಚನೆಯ ಭಿನ್ನತೆಯ ಮೂಲಕವಾಗಿ ಮತ್ತು ಅದು ಎದುರಿಸಬೇಕಾಗಿ ಬಂದ ಪರಿಸ್ಥಿತಿಯ ವ್ಯತ್ಯಾಸದ ಮೂಲಕವಾಗಿ ಚೈತನ್ಯಶಕ್ತಿಯು

ಲೋಕದಲ್ಲಿ ಕಾಣಿಸಿಕೊಳ್ಳುವಾಗ ತರತಮ ಸ್ವರೂಪದಲ್ಲಿ ಅನುಭವಕ್ಕೆ ಬರುವುದು ಅನಿವಾರ್ಯವಾದರೂ ಇವೆಲ್ಲ ಚೈತನ್ಯಗಳ ಮೂಲವು ಒಂದೇ ಅನಂತಶಕ್ತಿಯಾಗಿದೆಯೆಂಬಲ್ಲಿ ಸಂದೇಹವಿಲ್ಲ 'ಭೂತಸ್ಯ ಜಾತಃ ಪತಿಃ ಏಕ ಆಸೀತ್'' ಎಂಬುದನ್ನು ಆಧುನಿಕ ಮಾನಸಶಾಸ್ತ್ರೀಯ ಸಂಶೋಧನ ಗಳೂ ಇನ್ನೊಂದು ತೆರನಾಗಿ ಪುಷ್ಟೀಕರಿಸುತ್ತವೆ. ಕಳೆದ ಮಹಾ ಯುದ್ಧದ ಕಾಲಕ್ಕೆ ವೈಮಾನಿಕರು ಗಂಡಾಂತರ ಕಾಲದಲ್ಲಿ ಹೇಗೆ ವರ್ತಿಸಬಹುದೆಂಬ ವಿಚಾರದಲ್ಲಿ ಸಂಶೋಧನಮಾಡಲು ಇಂಗ್ಲೆಂಡಿನ ಮಾನಸಶಾಸ್ತ್ರಜ್ಞರ ಒಂದು ಸಮಿತಿಯನ್ನು ಅಲ್ಲಿಯ ಸರಕಾರವು ನೇಮಿಸಿತು. ಅವರು ಬೇರೆ ಬೇರೆ ಕುತ್ತುಗಳನ್ನು ಎದುರಿಸುವಾಗಿನ ಹಲವು ಪ್ರತ್ಯಕ್ಷ ಸಂಗತಿಗಳನ್ನು ನಿರೀಕ್ಷಿಸಿ ಒಂದು ವರದಿಯನ್ನು ಸಿದ್ಧಪಡಿಸಿದರು. ದಿನದ ಸಾಮಾನ್ಯ ವ್ಯವಹಾರಗಳಲ್ಲಿ ವ್ಯಕ್ತಿ ವ್ಯಕ್ತಿಗಳಲ್ಲಿ ತುಂಬ ವೈಶಿಷ್ಟ್ಯ, ಭಿನ್ನತೆಗಳು ಗೋಚರವಾಗುವುದು ನಿಜ. ಆದರೆ ಸಂಕಟ ಕಾಲದಲ್ಲಿ ಮನುಷ್ಯನು ಅತಿ ಮಾನವನಾಗಿ ನಡೆದುಕೊಳ್ಳುತ್ತಾನೆ. ಆಗ ಆತನೊಳಗಿನ ಸುಪ್ತಚೇತವು ಜಾಗೃತವಾಗಿ ಆತನಲ್ಲಿ ಇಂತಹ ಗುಣಗಳು ಇರಬಹುದೆಂಬ ಕಲ್ಪನೆಯು ಕೂಡ ಎಂದೂ ಆಗದೆ ಇರುವಂತಹ ಅಸಾಮಾನ್ಯ ಗುಣಗಳು ಅನುಭವಕ್ಕೆ ಬರುತ್ತವೆ. ಪ್ರೀತಿ, ಸ್ವಾರ್ಥತ್ಯಾಗ, ಧೈರ್ಯ, ಪ್ರಸಂಗಾವಧಾನ, ಇಷ್ಟ ಸಿದ್ಧಿಗಾಗಿ ದೇಹವನ್ನು ತೂರಿಬಿಡುವ ದಾರ್ಢ್ಯ, ಇಂಥ ಬಗೆಬಗೆಯ ಅಗಾಧ, ಅದ್ಭುತ ಸಾಮರ್ಥ್ಯವು ಒಬ್ಬೊಬ್ಬರಲ್ಲೂ ಅಂತರಾಳದ ಆಳದಲ್ಲಿ ಎಲ್ಲೋ ಇದ್ದುದರ ಮನವರಿಕೆಯಾಗುತ್ತದೆಂಬುದನ್ನು ಸೋದಾಹರಣವಾಗಿ ಆ ವರದಿ ಯಲ್ಲಿ ಹೇಳಲಾಗಿದೆ. ಸಂಕಟದಲ್ಲಿದ್ದಾಗ ಸಬ್‌ಮರೀನ, ವಿಮಾನಗಳಲ್ಲಿರುವ ಕೆಲಸಗಾರರು ಪುಕ್ಕತನವರಿಯರು. ವ್ಯಕ್ತಿತ್ವವನ್ನು ಮರೆತು ಒಂದು ವ್ಯಕ್ತಿ ಯಂತೆ ವರ್ತಿಸುವರು! ಅಲ್ಡಸ್ ಹಕ್ಸಲೆಯು ಹಾರ್ಪರ ಜರ್ನಲ್ಲಿನಲ್ಲಿ ಪ್ರಕಟವಾದ ಈ ವರದಿಯನ್ನು 'ಸನಾತನ ತತ್ತ್ವವಿಚಾರ'ವೆಂಬ ಗ್ರಂಥದಲ್ಲಿ ಉಲ್ಲೇಖಿಸಿದ್ದಾನೆ. ಮಾಲೆಯೊಳಗಿನ ಹೂಗಳನ್ನೆಲ್ಲ ಒಂದೆಡೆಗೆ ಅಂದವಾಗಿ ಹಿಡಿದಿರುವ ಒಳಗಣ ದಾರವು ಹೇಗೆ ಒಂದೆಯೋ ಹಾಗೆ ಮಾನವ ಸಮಾಜ ವನ್ನು ಸುಸಂಬದ್ಧವಾಗಿ ಇರಿಸುವ ಆಂತರಿಕ ಚೈತನ್ಯದ ಸತ್‌ಪ್ರವೃತ್ತಿಯ ಸೂತ್ರವು ಎಲ್ಲರಲ್ಲೂ ಒಂದೇ ಆಗಿದೆ. ಸಮತ್ವವು ಆಂತರ್ಯದ ಅನುಭವ ಪಡೆವಲ್ಲೇ ಉಂಟು.

ವ್ಯಕ್ತಿಯ ತಿಳುವಳಿಕೆಯ ಮಟ್ಟವು, ಅದು ಸಮಾಜದಿಂದ ಪಡೆದು ಕೊಂಡ ಜ್ಞಾನದ ಬಗೆಯನ್ನು ಅವಲಂಬಿಸಿದೆ. ಹುಟ್ಟಿನಿಂದ—ಅದೇಕೆ ಹುಟ್ಟಿನ ಮೊದಲಿನಿಂದಲೂ ವ್ಯಕ್ತಿಯ ,ಜೀವನದ ಮೇಲೆ ಸಂಸ್ಕಾರಗಳು ಆಗಲಾರಂಭಿಸುವುವು. ತಾಯ್ತಂದೆ, ಬಳಗದವರು, ಗುರುಹಿರಿಯರು, ಶತ್ರುಗಳು ಮಿತ್ರರು ಎಲ್ಲರಿಂದಲೂ ಅನೇಕ ಸಂಗತಿಗಳನ್ನು ವ್ಯಕ್ತಿಯು ತಿಳಿದೊ, ತಿಳಿಯದೆಯೊ ಚಿಕ್ಕಂದಿನಿಂದಲೇ ಎತ್ತಿಕೊಳ್ಳುತ್ತಿರುತ್ತದೆ. ಜಾನ ಪದಗಳು, ಕಥೆಗಳು, ಗಾದೆಗಳು, ರೂಢಿ-ಸಂಪ್ರದಾಯಗಳು ಶಾಸ್ತ್ರ, ಸಾಹಿತ್ಯ, ಕಲೆ ಮೊದಲಾದ ರೂಪದಿಂದ ಸಮಾಜವು ಅನಂತಕಾಲದಿಂದ ಕೂಡಿಟ್ಟ ನಿಕ್ಷೇಪದ ಲಾಭವು ಪ್ರತ್ಯಕ್ಷಾಪ್ರತ್ಯಕ್ಷ ರೀತಿಯಲ್ಲಿ ವ್ಯಕ್ತಿಗೆ ವಿಶಿಷ್ಟ ರೀತಿಯಲ್ಲಿ ದೊರೆಯುತ್ತದೆ. ಇದರ ಜೊತೆಗೆ ಜೀವನದಲ್ಲಿ ಅನು ದಿನದ ಅನುಭವಗಳು ಅರಿವಿನ ರೂಪತಾಳಿ ವ್ಯಕ್ತಿಯ ಚೈತನ್ಯದಲ್ಲಿ ಇಂಬು ಗೊಳ್ಳುತ್ತವೆ. ಇವೆಲ್ಲವುಗಳ ಸಮ್ಯಕ್‌ಪರಿಣಾಮವು ಒಂದು ವ್ಯಕ್ತಿಯ ವಿಚಾರ; ಸದಸದ್ವಿವೇಕ. ತಿಳಿವು—ಎಲ್ಲ. ತನ್ನ ಜೀವನದೃಷ್ಟಿಯು ಈ ವಿಶಿಷ್ಟ ರೀತಿಯಲ್ಲಿಯೇ ಏಕೆ ಮಾರ್ಪಟ್ಟಿತೆಂಬುದನ್ನು ಮೇಲಣ ಒಂದೊಂದು ಸಂಗತಿಯನ್ನೂ ಬಿಡಿಬಿಡಿಸಿ ಕಾಲಕಾಲಕ್ಕೆ ಯಾವ ಯಾವ ಮಾತಿನ ಪರಿಣಾಮವು ಎಷ್ಟೆಷ್ಟು ಆಗಿದೆಯೆಂಬುದನ್ನು ತಾಳ್ಮೆಯುಳ್ಳವರು ನಿದಾನಿಸಿಕೊಳ್ಳಬಹುದು. ಇಂತಹ ವಿಮರ್ಶೆಯಿಂದ ತಮ್ಮ ಹೆಚ್ಚಿನ ವಿಕಾಸದ ಮುಂದಿನ ದಾರಿಯನ್ನು ಕಂಡುಕೊಳ್ಳಬಹುದು. ಆತ್ಮನಿರೀಕ್ಷಣೆಗೆ ಸ್ವಲ್ಪವೂ ಬಿಡುವೇ ಇಲ್ಲದಷ್ಟು ವೇಗದಿಂದ ಜೀವನ ಪಥದಲ್ಲಿ ಓಡುತ್ತಿರು ವವರಿಗೆ ಎಡಹಿ ಬೀಳುವವರೆಗೆ ಆತ್ಮನಿರೀಕ್ಷಣೆಯ ಅವಶ್ಯಕತೆಯೆನಿಸದು.

ಅದೇನೆ ಇರಲಿ; ಇಂತು ಸಮ್ಯಕ್‌ಪರಿಣಾಮಗೊಂಡ ಜ್ಞಾನವೆ ವ್ಯಕ್ತಿಯ ಅಂತರಂಗದ ಅರಿವು. ವ್ಯಕ್ತಿಯು ಯಾವುದೊಂದು ಕೆಲಸಕ್ಕೆ ತೊಡಗುವಾಗ ತನ್ನೊಳಗಿನ ಅರಿವಿನ ಹಳೆಯ ಅನುಭವ-ವಿಚಾರಗಳ ಸಲಹೆ ಕೇಳುವನು; ಹಿಂದಿನ ಅರಿವು ಇಂದು ಮಾರ್ಗದರ್ಶಕ. ವಿವೇಕ, ಪ್ರಜ್ಞೆ, ಸತ್‌ಪ್ರವೃತ್ತಿ ಎಂದು ಇದಕ್ಕೆ ವಿವಿಧವಾದ ಹೆಸರುಗಳಿವೆ. ಬೇರೊಂದು ಸ್ವತಂತ್ರ ಸದಸದ್ವಿವೇಕವೆಂಬ ದೇವತೆ ಅಥವಾ ಅಂತರ್ಯಾಮಿ (ಶ್ರೀಹರಿ),

ಒಂದು ಈಶಶಕ್ತಿಯುಂಟೆಂದು ಹೇಳುವುದು ಕಾವ್ಯಮಯ ಅಲಂಕಾರಿಕ ರೀತಿಯೆ ಹೊರತು ವಾಸ್ತವ ಸತ್ಯವಲ್ಲ. ದೇವತೆಯೇ ಆಗಿದ್ದರೆ ಎಲ್ಲ ಕಾಲದಲ್ಲಿ, ಎಲ್ಲ ದೇಶಗಳ ಎಲ್ಲ ಸಮಾಜಗಳಲ್ಲಿ ಮಾನವರಿಗೆ ಆ ದೇವತೆ ಯಿಂದ ಒಂದೇ ಬಗೆಯಾದ ಆದೇಶಗಳು, ಸಂದೇಶ-ಸೂಚನೆಗಳು ದೊರೆಯಬೇಕಾಗಿತ್ತು ಆದರೆ ಲೋಕದಲ್ಲಿ ಇದಕ್ಕೆ ವಿಪರೀತವಾದ ಅನುಭವವಿದೆ. ತ್ಯಾಗ, ಸತ್ಯ, ಪ್ರೀತಿ, ಎಂಬೀ ಮೊದಲಾದ ಗುಣಗಳು-ಸತ್‌ಪ್ರವೃತ್ತಿಯೇ ಚೈತನ್ಯದ ಮೂಲ ಸ್ವಭಾವವೆಂಬುದು ನಿಜವಿದ್ದರೂ ಆಯಾ ದೇಶ-ಕಾಲದಲ್ಲಿರುವ ಸಮಾಜದ ವಿಚಾರ ಅಭಿರುಚಿಗಳ ಸಾಂಸ್ಕೃತಿಕ ಮಟ್ಟವನ್ನು ಮೀರಿ ಅದು ಎಂದೂ ವ್ಯಕ್ತವಾಗುವದಿಲ್ಲ. ಮಹಾವ್ಯಕ್ತಿಗಳಲ್ಲಿ ಇಪ್ಪತ್ತು ಮೂವತ್ತು ವರುಷಗಳ ಮುಂದಡಿಯುವರು ಕೆಲರು ಹೊರಡು ವರು; ಅಷ್ಟೇ ಅದೂ ಕಾಲಪ್ರವಾಹದಲ್ಲಿ ಅನಿವಾರ್ಯವಾಗಿರುವ ರೀತಿ ಯಲ್ಲಿಯೆ. ಸುಮಾರಾಗಿ ೨+೨=೪ ಇಂತಹ ಸಾರ್ವಕಾಲಿಕ ಮಾತು ಹೇಳು ವುದು ಬೇರೆ. ಆದರೆ ವಾಸ್ತವ ವ್ಯವಹಾರದ ಸಂಗತಿಗಳಲ್ಲಿ ಐವತ್ತು ವರುಷದ ವರೆಗಿನವೇ ಮಸಮಸಕಾಗಿ ಸ್ಥೂಲವಾಗಿ ಕಾಣುವವೆಂಬದು ಅನುಭವವಿರುವಾಗ ಅದಕ್ಕೂ ಮುಂದಿನ ಮಾತು ಏತಕ್ಕೆ ? ಅಂತರ್ಯಾಮಿ ಅಥವಾ ಒಳಗಿನ ಸಹಜ ಸಂಯಮ ಶಕ್ತಿ ಮತ್ತು ದೃಷ್ಟಿಯು ಚೈತನ್ಯದಲ್ಲಿ ಹುಟ್ಟನೊಡನೆಯೆ ಬಂದಿರುವುದಾದರೂ ಅದೊಂದು ಸ್ವತಂತ್ರ ದೇವತೆ ಯೆಂದು ಗ್ರಹಿಸುವುದು ಶಾಸ್ತ್ರೀಯ ವಿಚಾರವಲ್ಲ ಭಾವನಾತ್ಮಕ ಉಕ್ತಿ

ಆದಕಾರಣ ವಿವೇಕಶಕ್ತಿಯು ದೇವತೆಯಲ್ಲ; ಅದು ಪ್ರತಿಯೊಂದು ವ್ಯಕ್ತಿಗತ ನಿರ್ಣಯಸಾಮರ್ಥ್ಯ. ವ್ಯಕ್ತಿಯು ಬೆಳೆದ ಸನ್ನಿವೇಶ, ಪಡೆದು ಕೊಂಡ ಜ್ಞಾನದ ಯೋಗ್ಯತೆಯಂತೆ ಆಯಾ ವ್ಯಕ್ತಿಯ ನಿರ್ಣಯಗಳ ಮಟ್ಟವು ಹೆಚ್ಚುಕಡಿಮೆಯಾಗುತ್ತಿರುತ್ತದೆ. ಸಮಾಜದ ಮುಖಾಂತರ ವಾಗಿ ಪಡೆದುಕೊಂಡ ಅನುಭವವೆ ಜ್ಞಾನ. ಇದೇ ಚೈತನ್ಯದ ಭಾಗವಾಗಿ ಅರಿವು ಎನಿಸುವುದು ಆದುದರಿಂದ ಅರಿವಿನ ರೂಪ ತಾಳಿ ಸಮಾಜವೇ ಸೂಕ್ಷ್ಮರೂಪದಲ್ಲಿ ವ್ಯಕ್ತಿಗಳ ಅಂತರಂಗದಲ್ಲಿ ಪ್ರವೇಶ ಪಡೆಯುತ್ತದೆಂದು ಹೇಳಿದರೆ ತಪ್ಪಲ್ಲ. ಪ್ರತಿಯೊಂದು ವ್ಯವಹಾರದಲ್ಲಿಯೂ ಕೇಳಿದಾಗ ಇದು ನಮಗೆ ದಾರಿ ತೋರುವುದು; ಬೇಕು-ಬೇಡ, ಒಳಿತು-ಕೆಡಕುಗಳನ್ನು

ಸೂಚಿಸುವುದು. ನಾವು ಬೆಳೆದು ಬಂದ ಸಮಾಜದ ಮಟ್ಟ ಹಾಗೂ ಪಡೆದು ಕೊಂಡ ವಿಶ್ವದ ವಿಚಾರ-ಅನುಭವಗಳ ಬೇರೀಜಿನ ಸರಾಸರಿಗಿಂತ ಹಿರಿದು ಈ ಅರಿವು ಇರಲಾರದು. ಈ ಕಾರಣದಿಂದ ಸಮಾಜದ ಮಟ್ಟವು ಬೆಳೆಯದೆ ವ್ಯಕ್ತಿಗಳ ವಿಶೇಷ ವಿಕಾಸವಾಗಲಾರದು; ಆದರೂ ವ್ಯಕ್ತಿಗಳು, ವ್ಯಕ್ತಿಶಃ ಪ್ರಯತ್ನದಿಂದ ತಾವಿರುವ ಸಮಾಜದ ಹೊರಗೂ ತಮ್ಮ ದೃಷ್ಟಿಯನ್ನು ಚೆಲ್ಲಿ, ಪ್ರವಾಸ ಅನುಭವ-ಮನನ-ನಿಧಿಧ್ಯಾಸಗಳಿಂದ ತಮ್ಮ ವಿಚಾರದ ಕ್ಷೇತ್ರಗಳನ್ನು ಹಿಗ್ಗಿಸಿಕೊಳ್ಳಬಲ್ಲರು ಮಹಾಪುರುಷರೂ ಜ್ಞಾನಿಗಳೂ ಈ ವರ್ಗಕ್ಕೆ ಸೇರುತ್ತಾರೆ. ಇಂತಹರ ಪ್ರಯತ್ನಗಳಿಂದ ಸಮಾಜದ ಅರಿವಿನ ಉದ್ದಗಲಳತೆಗಳು ಎಷ್ಟೋ ವಿಸ್ತಾರವಾಗುತ್ತವೆ. ಇಂತು ಸಮಾಜದಿಂದ ವ್ಯಕ್ತಿ, ವ್ಯಕ್ತಿಗಳಿಂದ ಸಮಾಜ, ಪರಸ್ಪರ ಸಹಾಯ ಪೋಷಣೆಗಳನ್ನು ಹೊಂದಿ ಲಾಭಪಡೆಯುವುದುಂಟು. 'ಪರಸ್ಪರಂ ಭಾವಯಂತಃ ಶ್ರೇಯಃ ಪರಂ'. ಆದುದರಿಂದ ಸಮಾಜವನ್ನು ತೆಗಳುವ ಅಥವಾ ಬಿಟ್ಟೋಡುವ ವ್ಯಕ್ತಿಯು ಆತ್ಮಘಾತಕಿ. ವ್ಯಕ್ತಿಗೆ ಬೆಲೆಕೊಡದೆ ಶೂನ್ಯದಂತೆ ನಡೆಸಿಕೊಂಬ ಸಮಾಜ ತನ್ನ ಪ್ರಾಣ ತಾನೇ ಹರಣಮಾಡುತ್ತಿರುವ ಮಹಾಪಾತಕಿ.

ಪ್ರಜ್ಞೆ ಅಥವಾ ಅರಿವು ನಿಚ್ಚಳವಾಗಿ ತಲೆದೋರಿದಂತೆ ಅಂತರಾಳ ದಲ್ಲಿ ಎರಡರ ಅನುಭವವು ಬರುವುದು. ಈ ಎರಡರ ಅನುಭವವೇ ಬಾರ ದಿದ್ದವನು ಎಗ್ಗ—ಏಕ ಇವರು ಏಕಾಂಗಿಗಳು. ಎತ್ತ ಒಲಿಯುವರೊ ಅತ್ತಲೇ. ಇನ್ನೊಂದು ಬದಿಯ ತೂಕಹಿಡಿವ ವಿಚಾರವು ಇವರಲ್ಲಿ ಉದಯವಾಗಿರುವುದಿಲ್ಲ ಅಥವಾ ಅದು ಇನ್ನೂ ಹಸುಕು ಇರುವಾಗಲೆ ಚಿವುಟಿ ಒಳಬೆಳಕಿಗೆ ಎರವಾಗುತ್ತಾರೆ. ಒಳಗಣ್ಣು ಕಳೆದುಕೊಂಡ ಇವರು ಒಕ್ಕಣ್ಣಿಗಳಾಗಿ ವಸ್ತುಗಳ ಇನ್ನೊಂದು ಮಗ್ಗಲು ನೋಡುವುದಕ್ಕೆ ಅಸ-ಮರ್ಥರಾಗುತ್ತಾರೆ. ಆದರೆ ಒಂದೇ ಮಗ್ಗಲು ಇರುವ ವಸ್ತುವೇ ಇಲ್ಲ. ಲೋಕದಲ್ಲಿ ಆದಕಾರಣ ಒಂದಕ್ಕಿಂತ ಹೆಚ್ಚು ಮಗ್ಗಲುಗಳನ್ನು ನೋಡಲು ಆರದ ವ್ಯಕ್ತಿ ಏಕಾಂಗಿ; ಒಕ್ಕಣ್ಣಿ. ಇಂತಹರು ಜೀವವಿದ್ದರೂ ನಿರ್ಜೀವರು. ಏಕೆಂದರೆ ಇವರ ಕ್ರಿಯೆಗಳು ಜ್ಞಾನರೂಪದಲ್ಲಿ ಪರಿಣಮಿಸುವುದಿಲ್ಲ. ಸಮಾಜದಿಂದ ಆದರ ಅನುಭವ ನಿಧಿಯನ್ನು (ಶಾಸ್ತ್ರ, ಸಾಹಿತ್ಯ, ಕಲೆ ಮು.)

ಪಡೆದುಕೊಂಡು ಚೇತನದಲ್ಲಿ ಅಳವಡಿಸಿಕೊಂಡಿರುವುದಿಲ್ಲ. ಯಂತ್ರವತ್ ಕ್ರಿಯೆಗಳನ್ನು ಮಾಡುವವರ ಬಗೆಯು ಹೀಗೆ ಬರಿದು. ಜೀವನ ಸೂತ್ರ ಗಳನ್ನು ಹೊರಗಿನ ಯಾವುದೊ ವ್ಯಕ್ತಿಗೆ ಒಪ್ಪಿಸಿ, ಅವರ ಕೈಗೊಂಬೆಗಳಾಗಿ ವರ್ತಿಸುವವರ, ಅಥವಾ ಪೆಚ್ಚುಗಳಾಗಿಯೆ ಜನ್ಮತಾಳಿದ ಮುಬ್ಬುಗಳ ಬದುಕಿನ ರೀತಿಯಿದು.

ಒಳಗೂ ಹೊರಗೂ ಒಂದೇ ಶಿರನಾಗಿ ಜೀವಿಸುವುದು, ಎರಡಿಲ್ಲದ ಬಾಳಿನವರಾಗಿ ಬದುಕು ಮಾಡುವುದು ಜೀವನದ ಪರಮ ಸಾಧ್ಯ. ನಿಜ. ಹೊರಗಿನದಕ್ಕೆ ಒಳಗಿನದು (ಎಂದರೆ ಜ್ಞಾನ) ಸರಿಹೊಂದಿರಬೇಕೆ ? ಅಥವಾ ಒಳಗಿನದಕ್ಕೆ ಹೊರಗಿನದು ಹೊಂದಿಕೆಯಾಗಿರಬೇಕೆ ? ಇವೆರಡರ ತೂಕಹಿಡಿವಲ್ಲಿ ವ್ಯಕ್ತಿಯ ಯೋಗ್ಯತೆ, ವ್ಯಕ್ತಿತ್ವವು ವ್ಯಕ್ತವಾಗು ತ್ತದೆ. ದಿನಾಲು ಹೊರಗಿನ ವಾತಾರವಣವು ಬದಲಾಗುತ್ತಲೇ ಇರುತ್ತದೆ. ಬದಲಾದ ವಾತಾವರಣಕ್ಕೆ ಕೆಲಬಾರಿ ಒಳಗಿನ ಬಾಳು ಒಗ್ಗುವದಿಲ್ಲ. ಹೊರಗಣ ವಾತಾವರಣಕ್ಕಿಂತ ಒಳಗಣ ಅರಿವು ಹೆಚ್ಚು ವೇಗದಿಂದ ಪಲ್ಲಟಗೊಳ್ಳುವ ಸ್ವಭಾವವುಳ್ಳದ್ದು. ಕ್ಷಣಕ್ಷಣಕ್ಕೂ ಬರುವ ಅನುಭವ, ಜ್ಞಾನಕ್ಕನುಸರಿಸಿ ಒಳಗಣ ಠೀವಿ ಮಾರ್ಪಡುವುದರಿಂದ ಹೊರಗಣ ಪರಿ ಸ್ಥಿತಿಯು ಅದಕ್ಕೆ ಒಪ್ಪಿಗೆಯಾಗುವುದಿಲ್ಲ. ಹೊರಗಿನ ಬಾಳಿಗೆ ಬೆಲೆಕೊಡು ವವರು ವ್ಯವಹಾರಿಗಳಾಗುತ್ತಾರೆ. ಒಳಗಿನ ಇರವಿಗೆ ಮಹತ್ವವನ್ನೀವವರು ಆದರ್ಶವಾದಿಗಳೆನಿಸುತ್ತಾರೆ. 'ವ್ಯಕ್ತಿ' ವ್ಯವಹಾರಿ; 'ಪುರುಷ' ಆದರ್ಶ ವಾದಿ. ಒಳಹೊರಗಣ ತಿಕ್ಕಾಟವಿಲ್ಲದೆ ನಿಜವಾದ ಜೀವನವೆ ಅಸಾಧ್ಯ. ಆದುದರಿಂದ ಈ ಗಸಣಿಗೆ ಬೇಸತ್ತು, ಇವುಗಳಲ್ಲಿ ಯಾವುದಾದರೂ ಒಂದರ ಪರಿಲು (ಸಂಬಂಧ) ಹರಿದುಕೊಂಡು ಕೋಟಲೆಯೊಳಗಿಂದ ಪಾರಾಗಬಯಸುವವರೇ ಬಹಳ. ಇದು 'ಅರ್ಧಾಂಗ' ಜೀವನ ಹದವನ್ನು ಅರಿತು ಎರಡರ ಸಮತೂಕವನ್ನು ಸಾಧಿಸುವ ಯೋಗವೇ ಲೋಕಕ್ಕೆ ಉಪ ಕಾರಿ ಸಮಾಜಕ್ಕೆ ಹಿತಕಾರಿ.

ಸಾಕ್ಷಿಯ ಅರಿವಿಲ್ಲದ ಕೃತಿಯಲ್ಲಿ ಸೊಗಸು ಇಲ್ಲ. ಸಾಕ್ಷಿಯ ಅರಿವಿ ನಿಂದ ಮಾಡುವ ಕೃತಿಯು ಅಧರ್ಮವಲ್ಲ. ಏಕೆಂದರೆ ಸಮಾಜದ ತಿಳಿ ವಳಿಕೆಯ ಮಟ್ಟಕ್ಕೆ ಬಾರದ ಅಥವಾ ಸಮಾಜದವರ ಸತ್ಯದ ಕಲ್ಪನೆಗೆ

ವಿಪರೀತವಾದ ಕೃತಿಗೆ ವಿಪರೀತವಾಗಿ ಅಂತಃಸಾಕ್ಷಿಯು ತನ್ನ ಒಪ್ಪಿಗೆಯನ್ನು ಎಂದೂ ಕೊಡಲಾರದು. ಏಕೆಂದರೆ ಸಾಕ್ಷಿ-ಅರಿವು ಜ್ಞಾನರೂಪ-ತಾಳಿದ ಸಮಾಜದ ಸಾರರೂಪ. ಸಾಕ್ಷಿಯಿಲ್ಲದೆ ಜರುಗುವ ಕೃತಿ, ಪಶುಗಳ ಮಟ್ಟದ್ದು. ಅದು ಮಾನವ ಕೃತಿಯಲ್ಲ. ವಿಚಾರವಂತರ ಕೃತಿಯಂತೂ ಮೊದಲೇ ಅಲ್ಲ. ಆದಕಾರಣ ಅಂತಃಸಾಕ್ಷಿಯಾದ ಅರಿವನ್ನು ಎರಡರ ತೊಂದರೆಯೆ ಬೇಡವೆಂದು ಕೊಂದುಕೊಳ್ಳುವುದು ಅಥವಾ ಮೂರ್ಛಿತವಾಗುವ ಸ್ಥಿತಿ ಯಲ್ಲಿಡುವುದು ಅನ್ಯಾಯ. ಇದೇ ಅನೀತಿ. ಸಾಕ್ಷಿಯಿಲ್ಲದ ವ್ಯವಹಾರ ಅನೀತಿ. Secrecy is sin ಎಂದು ಗಾಂಧಿಜೀಯ ಮಹಾವಾಕ್ಯವಿದೆ. ಸಾಕ್ಷಿಯಾದ ಅರಿವು ಸಮಾಜದ ಸೂಕ್ಷ್ಮರೂಪವೆಂದು ಮೇಲೆ ವಿವರಿ ಸಿದ್ದಾಗಿದೆ. ಅಂತಃಸಾಕ್ಷಿಯ ಮನ್ನಣೆ ಪಡೆದ ಕೃತಿಯೆ ಪವಿತ್ರ. ಅನುಭವ ಹಾಗೂ ಸಮಾಜದ ಜ್ಞಾನನಿಕ್ಷೇಪ ಇವೆರಡನ್ನು ಅರಗಿಸಿಕೊಂಡ ತಿಳಿವೆ ಅರಿವು ಇದು ತೋರುವ ದಾರಿಯಲ್ಲಿ ನಡೆಯಲು ತುಂಬ ಎದೆ ಗಾರಿಕೆ ಬೇಕು. ತ್ಯಾಗಬೇಕು 'ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಃ ತತ್ ಕವಯೋ ವದಂತಿ'. ಖಡ್ಗಧಾರೆಯ ಮೇಲಣ ಕಷ್ಟ ಕರವಾದ ದಾರಿ. ಈ ಕಷ್ಟವೇ ಬೇಡವೆಂದು ಅರಿವನ್ನು ಕೊಂದುಕೊಂಡು ಯಾವನಾದರೊಬ್ಬ ನೇತಾರನೊ, ಗುರುವೊ, ಕೊನೆಗೆ ಫಲಜ್ಯೋತಿಷವೊ, ಶಕುನವೊ ಒಂದಕ್ಕೆ ಶರಣುಹೋಗಿ ದೈನ್ಯದಿಂದ ಬಾಳಲು ನರಪ್ರಾಣಿಯು ಒಪ್ಪಿಕೊಳ್ಳುವುದು.

ಮಾನವರ ಬಾಳಿನ ಬಗೆಯನ್ನು ಮುಂಡಕೋಪನಿಷತ್ತಿನಲ್ಲಿ ಒಂದು ಸೊಗಸಾದ ರೂಪಕದಿಂದ ವಿವರಿಸಿದ್ದುಂಟು ಒಂದು ಮರದಲ್ಲಿ ಎರಡು ಗೆಡೆವಕ್ಕಿಗಳು ಕುಳಿತಿವೆ. ಅವುಗಳಲ್ಲಿ ಒಂದು ಹಣ್ಣು ಸವಿ ಯುತ್ತದೆ. ಇನ್ನೊಂದು ತಾನು ತಿನ್ನದೆ (ತಿನ್ನುವ ಹಕ್ಕಿಯನ್ನು ಬರಿ) ನೋಡುತ್ತಲಿದೆ (೩-೧). ತಿನ್ನದಿರುವ ಹಕ್ಕಿಯೆ ಸಾಕ್ಷಿ ನೋಡುವ ಕೆಲಸವು ಮಾತ್ರ ಇದರದು. ಮೇಲು ನೋಟದವರ ಕಡೆಗೆ ಒಡೆತನವಷ್ಟೆ? ಫಲಭೋಗದಲ್ಲಿ ತೊಡಗಿದ ಹಕ್ಕಿಗೆ ಈ ವೈಷಮ್ಯ! ತಾನು ಒಡೆಯನಲ್ಲ; ತನ್ನನ್ನು ಒಬ್ಬರು ನೋಡುತ್ತಲಿದ್ದಾರೆ! ಅವರ ಕಣ್ಣಳತೆಯಲ್ಲಿದ್ದು ತಾನು ಎಲ್ಲವನ್ನೂ ಮಾಡಬೇಕೆ? ಅಯ್ಯೋ ಇದೇನು ಕಷ್ಟ! ಪರಾವಲಂಬನ!

(ಅನೀಶಯಾ ಶೋಚತಿ) ಎಂದು ಮಿಡುಕುವುದಾಗಿ ಮುಂಡಕದ ಋಷಿಯು ಮಾಡಿದ ಮನೋವಿಶ್ಲೇಷಣವು ತುಂಬ ಸಮರ್ಪಕವಾಗಿದೆ. ಸಾಕ್ಷಿಯಾದ ಅರಿವು ತಿನ್ನದೇ ಸುಮ್ಮನಿರುವುದಾದರೂ ಒಳಿತು ಕೆಡುಕೆಂದು ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸದೆ ಮೌನವಾಗಿರುವುದಿಲ್ಲ. ಅದರಿಂದ ತಿನ್ನುವ ಹಕ್ಕಿಗೆ ಫಲಭೋಗದಲ್ಲಿ ತುಂಬ ಆತಂಕವಾಗುವುದು ಅದನ್ನು ತಿನ್ನಬೇಡ; ಇದನ್ನು ಇಂತಹದನ್ನೇ ತಿನ್ನು; ಹಾಗೆ ಬೇಡ; ಈ ಬಗೆಯಾಗಿಯೆ ತಿನ್ನು;' ಎಂದು ಮೊದಲಾಗಿ ವಿಧಿಸುವುದು ಈ ತೆರನಾದ ಸಂಯಮ, ನಿಯಮಗಳಿಗೆ ಒಳಗಾಗಿ ಇರಲು—ಜ್ಞಾನಕ್ಕೆ ಒಳಗಾಗಿ ನಡೆಯಲು ದೇಹಬುದ್ಧಿಯು ಗೊಣಗುವುದು; ಒಪ್ಪದಾಗುವುದು ವ್ಯಕ್ತಿಯ ಸತ್ವಪರೀಕ್ಷೆಯು ಇಲ್ಲಿಯೆ.

ವ್ಯಕ್ತಿಯು ಪುರುಷಾಕಾರವನ್ನು ಹೊಂದಲು ಆ ತೆರನಾಗಿ ವಿಕಾಸಗೊಳ್ಳುವಾಗಿನ ಮಹಾವಿಘ್ನವು ಇಲ್ಲಿಯೆ ತಲೆದೋರುತ್ತದೆ. ಮಾನವನಿಗೆ, ತಾನು ತಿನ್ನುತ್ತಿದ್ದೇನೆ; ಆನಂದವನ್ನು ಅನುಭವಿಸುತ್ತಲಿದ್ದೇನೆ, ಎಂಬ ನೆನಹಿನ—ಅರಿವಿನ ಸೊಗಸಂತೂ ಬೇಕು. ಅದಿಲ್ಲದೆ ಸುಮ್ಮನೆ ಆದ ಉಪಭೋಗದಲ್ಲಿ ಅಷ್ಟು ಆನಂದವಿಲ್ಲ. ಅಲಂಕಾರಗಳನ್ನು ಧರಿಸಿ ಕೋಣೆಯಲ್ಲಿಯೆ ಇರಲು ಮನಸು ಒಪ್ಪದು ತಾನು ತಿಂದುದನ್ನು, ತಾನು ಅಲಂಕೃತನಾದುದನ್ನು, ತಾನು ವೈಭವದಿಂದ ಮೆರೆಯುತ್ತಲಿದ್ದುದನ್ನು ಯಾರೂ ನೋಡುವವರೇ ಇದ್ದಿಲ್ಲವಾದರೆ ಜೀವವು ಆನಂದದ ಬದಲು ದುಃಖಿಸುವುದು ! 'ಸಾಕ್ಷಿ'ಯ ಆವಶ್ಯಕತೆಯಂತೂ ಇದೆ ಆದರೆ ಇವರಿಗೆ ಮೂಕ ಸಾಕ್ಷಿಬೇಕು ! ಅದೆಂತು ಸಾಧ್ಯ ? ನೋಡಬಂದ ಜನ ಆಡಿಕೊಳ್ಳತಕ್ಕುದೇ ಅದು ಅದರ ಸ್ವಭಾವ. ಅದು ಆಡಿಕೊಂಬುದು ನಿಜವಾದ ವಿವೇಕಿಗೆ ಲಾಭಕರವೇ ಏಕೆಂದರೆ ಅವರ ವಿಮರ್ಶೆ, ಟೀಕೆ, ಉದ್ಗಾರಗಳಿಂದ ವ್ಯಕ್ತಿಯ ವಿಚಾರಗಳಿಗೆ ಪ್ರಚೋದನೆ ದೊರೆಯುತ್ತದೆ. ಸದಭಿರುಚಿಯು ಜಾಗೃತವಾಗುತ್ತದೆ. ಸಾಕ್ಷಿ ಮೂಕವಿದ್ದಲ್ಲಿ ಸುಧಾರಣೆಗೆ ಇಂಬಿಲ್ಲ. ಸುಧಾರಣೆಯ ಆಸೆಯೇ ಇಲ್ಲ. ವ್ಯಕ್ತಿಗೆ ಜೀವನಾನಂದವನ್ನು ಉಪಭೋಗಿಸಲು ಅಂತಃಸಾಕ್ಷಿಯಂತೂ ಬೇಕೆನಿಸುತ್ತದೆ. ಆದರೆ ಅದರ ವಿಮರ್ಶೆ, ಟೀಕೆಗಳ ಚುಚ್ಚುವಿಕೆ ಮಾತ್ರಬೇಡ ! ಸಲ್ಲದ ಹಣ್ಣಿಗೆ ಬಾಯಿ ಹಾಕಿ ತಿನ್ನಬಯಸಿದಾಗ ಅಥವಾ ತಿನ್ನುವಾಗ ಅಂತಃಸಾಕ್ಷಿಯ ಕೂರಲಗಿನ

ನುಡಿಗಳ ವೇದನೆಗೆ ಜೀವವು ಕಸಿವಿಸಿಗೊಳ್ಳುವ ಸಂದರ್ಭದಲ್ಲಿ ಈ ಅರಿವು, ಜ್ಞಾನವು ನಂಜಿನಂತಾದುದರ ಅನುಭವವು ಬರುವುದು. Ignorance is bliss; ಅಜ್ಞಾನವೇ ಅಮೃತ; ತಿಳಿವು ಏತಕ್ಕೆ ಬಂತು ? ಎಂದು ಮಿಡುಕುವ ಹೊತ್ತು ವ್ಯಕ್ತಿಗೆ ಬರುವುದು. ಇದು ಪ್ರಾಮಾಣಿಕರಾದ ಮೊದ್ದರ ರೀತಿಯಾಯ್ತು ಚುರುಕು ಬುದ್ಧಿಯವರು ಮಂಗತತ್ವಜ್ಞಾನದ ಸಹಾಯವನ್ನು ಪಡೆದು ತಮ್ಮ ಕೃತಿಗಳ ಮಂಡನಮಾಡಿಕೊಳ್ಳುವರು ಈ ಚಟವನ್ನು ಬಿಟ್ಟುಕೊಡುವ ವರೆಗೂ ಇಂಥ ವ್ಯಕ್ತಿಗಳ ಪ್ರಗತಿಯ ಆಶೆಯಿಲ್ಲ.

ಸಮಾಜದೊಡನೆ ಬರುವ ಸಂಬಂಧದಲ್ಲಿ ವ್ಯಕ್ತಿಯು ನಾನಾಮುಖವಾಗಿ ಬೆಳೆಯುವಾಗ ಮುನ್ನೆಚ್ಚರಿಕೆಯಿಲ್ಲದಿದ್ದಲ್ಲಿ ಇನ್ನೊಂದು ತೊಂದರೆಯು ತಲೆದೋರುತ್ತದೆ. ವಿಕಾಸಗೊಳ್ಳುತ್ತಿರುವ ನಾನಾ ಮುಖದ ಜೀವನವನ್ನು ಆಂತರಿಕವಾಗಿ ಒಂದು ಶ್ರುತಿಗೆ ಸರಿಹೊಂದಿಸುವ ಸತ್ ಪ್ರವೃತ್ತಿಯ ಬಂಧನವು ಇಲ್ಲವಾದರೆ ಅವುಗಳಲ್ಲಿ ಅಸಂಬದ್ಧತೆಯು ಕಾಣಿಸಿಕೊಂಬುದು ಅನಿವಾರ್ಯ : ಪೂರ್ವವಯಸ್ಸಿನಲ್ಲಿ ಮನೆಯವರಿಂದಾದ ಮದುವೆ ಒಂದು; ಪ್ರೌಢ ವಯಸ್ಸಿನಲ್ಲಿ ಧನ-ಸ್ಥಾನ-ಮಾನಗಳನ್ನು ಕಂಡು ಮೆಚ್ಚಿ ಒಲಿದು ಹತ್ತಿರ ಸುಳಿಯುತ್ತಿರುವವರು ಬೇರೆ. ಪ್ರಾಮಾಣಿಕತೆಯಿದ್ದರೆ ಇವೆರಡೂ ಮುಖಗಳಲ್ಲಿ ಕಾಣಿಸಿಕೊಂಬ ಸಂಯಮಯುಕ್ತ ಉಲ್ಲಾಸವೇ ಬೇರೆ. ಆದರೆ ಮನೆಯ ಸಂಬಂಧವೇ ಬೇರೆ. ಹೊರಗಿನ ಸಂಬಂಧವೇ ಬೇರೆ. ದೈಹಿಕ ಆರ್ತತೆಯ ತೃಪ್ತಿಯಾದರೂ ಅಲ್ಲಿ, ಮನದ ಹಸಿವು ತಣಿಯಲಿಲ್ಲ. ಬೌದ್ಧಿಕ ಜೀವನದಲ್ಲಿ ಸಹಭಾಗಿಯಾಗಿ ನಲಿವವರೊಡಗೂಡುವ ಸಂತಸವು ಈ ಜೀವಕ್ಕೆ ಬೇಡವೇ ? ಎಂಬೀ ತೆರನಾದ ಭೃಂಗವೃತ್ತಿಯ ಮಾತಿನ ಮೋಡಿಯಿಂದ ಆತ್ಮವಂಚನೆಗೆ ಆರಂಭವಾಗುವುದು ಭೃಂಗವಿಲಾಸಕ್ಕೆ ಸವಿಗಲಿತ ಇಂತಹರ ನಾಲಗೆಯ ಚಾಪಲ್ಯದ ಚೌಚೌ (ಸವಿ)—ಅಂತಹ ವಾಕ್‌ಝುರಿ—ಗಾರುಡಿವಿದ್ಯೆ, ಇದರ ಒನಪು ಒಯ್ಯಾರದ ಆಕರ್ಷಣವೇ ಬೇರೆ. ಇವರು ಎಷ್ಟು ಮುಖದಲ್ಲಿ ಬೆಳೆದಿರುವರೋ ಅಷ್ಟು ಮುಖಗಳೇ ಬೇರೆ. ಸನಾತನ ಧರ್ಮಪ್ರವೃತ್ತಿಕ

ಸಭೆಯ ಅಧ್ಯಕ್ಷ, ಹರಿಜನೋದ್ಧಾರ ಮಂಡಲದ ಕಾರ್ಯದರ್ಶಿ, ಸರ್ವೋದಯ ಸಮಾಜದ ಕೋಶಾಧ್ಯಕ್ಷ ××× ಮತದ ವಿದ್ಯಾರ್ಥಿ ನಿಲಯದ ಉಪಾಧ್ಯಕ್ಷ, ಜಾಗತಿಕ ಯುದ್ಧವಿರೋಧಿ ಮಂಡಲದ ಸದಸ್ಯ, ಪ್ರಾಂತಿಕ ಸೈನಿಕ ಸಂಗ್ರಹ ಕೇಂದ್ರದ ಮೇಲ್ವಿಚಾರಕ ಇತ್ಯಾದಿ ಇತ್ಯಾದಿ. ಒಂದಕ್ಕೆ ಇನ್ನೊಂದರ ಸಂಬಂಧವಿರಬೇಕೆಂಬುದರ ಬಂಧನವು ಇವರಿಗೆ ಮಾನ್ಯವಿಲ್ಲ. ಅನಿರ್ಬಂಧ ಸ್ವಾತಂತ್ರ್ಯವೇ ಇವರ ಜೀವನದ ಗುರಿ! ಒಂದು ಬಗೆಯ ಬುದ್ಧಿಭ್ರಮೆ ಅಥವಾ ಬೌದ್ಧಿಕ ವ್ಯಭಿಚಾರದಿಂದ ಅಂತಃಸಾಕ್ಷಿಗೆ ಮಂಕುಹಿಡಿಸದೆ ಇವರ ಇಂಥ ಚೆಲ್ಲಾಟಗಳು ನಡೆಯಲಾರವು. (ಸಾಕ್ಷಿ) ಪುರುಷನು ತನ್ನ ಕೈಗೊಂಬೆಯಾಗಿರಬೇಕು; ತನ್ನ ಇಚ್ಛೆಗೆ ಪುಷ್ಟೀಕರಿಸುತ್ತ ಅನುಸರಿಸಿಕೊಂಡಿರಬೇಕೆಂಬ ವ್ಯಾಮೋಹದ 'ಕ್ಲಿಯೊಪಾತ್ರಾ', ಈ ವ್ಯಕ್ತಿಗಳು !

ಬುದ್ಧಿಯು ಸ್ವಾರ್ಥದ ತೊತ್ತು ಆದಲ್ಲಿ, ಮುಂದಿನ ಅನಾಹುತಗಳಿಗೆಲ್ಲ ಅದುವೆ ಸಂಚಕಾರ. ಅಣುಬಾಂಬುಗಳ ನಿರ್ಮಿತಿಯೇ ಇದಕ್ಕೆ ನಿದರ್ಶನ ಈ ಕಾರಣದಿಂದ ಬೌದ್ಧಿಕ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ ಅತ್ಯಗತ್ಯ. ಯಾವುದೊಂದು ಪಕ್ಷಪಂಗಡಕ್ಕೆ, ಮತಧರ್ಮಕ್ಕೆ ಮಾರಿಕೊಂಡ ಅಥವಾ ಮಾರುವೋದ ಬುದ್ಧಿಯು ತನ್ನ ಸ್ವಾತಂತ್ರ್ಯಕ್ಕೆ ಎರವಾಗುತ್ತದೆ. ಸತ್ಯದ ಹೊರತು ಬೇರಾವುದಕ್ಕೂ ಶರಣೆನ್ನಲಾರೆ ಎಂಬ ಪ್ರತಿಜ್ಞೆಯಿಲ್ಲದ ಬುದ್ಧಿ ತನ್ನ ತೇಜಸ್ಸನ್ನು ಕಳೆದುಕೊಳ್ಳುತ್ತದೆ. ಅನುಕೂಲ ಸಂಗತಿಗಳನ್ನಷ್ಟೇ ನೋಡುವ ಚಟವು ವ್ಯಕ್ತಿಯ ದೃಷ್ಟಿಯನ್ನು ಸಂಕೋಚಗೊಳಿಸುತ್ತದೆ. ಚೈತನ್ಯಶಕ್ತಿಯ ಎದುರು ಯಾವುದೊಂದು ಘಟನೆಯ ಪೂರ್ವೋತ್ತರಗಳನ್ನೆಲ್ಲ ಹೇಡಿತನದಿಂದ ಮರೆಮಾಜದೆ ಬಿಚ್ಚಿಡುವ ಧೈರ್ಯವಿದ್ದವರ ಬುದ್ಧಿಯು ಪ್ರಗಲ್ಭವಾಗುತ್ತ ಹೋಗುವುದು. ಇಂತಹರಿಗೆ ಸ್ವತಂತ್ರ ವಿಚಾರ, ತತ್ವಗಳ ದರ್ಶನವಾಗಿ ಮುಂದಿನ ಹಾದಿಯು ನಿಶ್ಚಿತವಾಗಿ ಕಾಣುವುದು. ಈ ದಾರಿಯಲ್ಲಿ ಅರಿಯದಲೆ ಆದ ತಪ್ಪು ತಪ್ಪಲ್ಲ. ಸತ್ಯಜ್ಞಾನಕ್ಕಾಗಿ ಮಾಡುತ್ತಿರುವ ಪ್ರಯೋಗವದು. ಅದರಿಂದ ಬುದ್ಧಿಗಲಿತು ತಿದ್ದಿಕೊಂಡು ಮುನ್ನಡೆವವರಿಗೆ, ಆದ ತಪ್ಪೂ ಪ್ರಗತಿಗೆ ಸಾಧಕವಾಗುವುದು. ಆದಕಾರಣ ಅಜ್ಞಾನದಿಂದ ಆದ ಪ್ರಾಮಾಣಿಕ ತಪ್ಪು ತಪ್ಪಲ್ಲ. ತಪ್ಪೆಂದು

ತಿಳಿದಿದ್ದೂ ಮತ್ತೆ ಅದರಲ್ಲಿಯೇ ಬಿದ್ದುಕೊಂಡಿರುವುದು ತಪ್ಪು. ಅಧರ್ಮ. ಇದೇ ಅನೀತಿ.

'ಹಣ್ಣು ತಿನ್ನುವ ಹಕ್ಕಿಯು, ತನ್ನ ಈಶಶಕ್ತಿಗೆ ಎಂದರೆ ಪ್ರಭುತ್ವಕ್ಕೆ ಎರವಾಗಬೇಕಾದುದಕ್ಕೆ ಮಿಡುಕುತ್ತಿದೆ;' ಎಂದು ಮುಂಡಕೋಪನಿಷತ್ತಿನ ಋಷಿಯು ಹೇಳಿದ ಮಾತು ಬಹಳೇ ಮಾರ್ಮಿಕವಾಗಿದೆ. ಫಲಭೋಗಿಯು ಪ್ರಭುವಲ್ಲ. ಅರಿವು ಎಂದರೆ ಜ್ಞಾನದಲ್ಲಿ ಪ್ರಭುಶಕ್ತಿಯಿದೆ. ಆದುದ ರಿಂದಲೇ ಸಾಕ್ಷಿಗೆ ಪ್ರಭು, ಈಶ, ಅಧ್ಯಕ್ಷ ಎಂದು ಉಪನಿಷತ್ತು, ಗೀತೆಯಲ್ಲಿ ವರ್ಣಿಸಿದ್ದುಂಟು. ಭೋಗೇಚ್ಛೆಯು ವಿಚಾರ ಸ್ವಾತಂತ್ರ್ಯಕ್ಕೆ ಮಾರಕ. ವಿಚಾರ ಸ್ವಾತಂತ್ರ್ಯವಿಲ್ಲದವರು ಬದ್ಧರು. ಬದ್ಧರು ಪ್ರಭುಗಳಲ್ಲ. ಅವರು ಆಸಕ್ತಿಯ ಮೂಲಕವಾವಾಗಿ ಸಿಕ್ಕುಬಿದ್ದಿರುತ್ತಾರೆ ಈ ಕಾರಣ ದಿಂದ ಜ್ಞಾನಶಕ್ತಿಯು ತನ್ನ ಸ್ವಾತಂತ್ರ್ಯವನ್ನು ಕಾಯ್ದುಕೊಳ್ಳಲು ಆಸಕ್ತಿ ರಹಿತವಾಗಿರಬೇಕು. ತನ್ನ ಗುಣದೋಷಗಳೆರಡನ್ನೂ ಅರಿವ ತಾಟಸ್ಥ್ಯವು ತಿಳುವಳಿಕೆಯುಳ್ಳವರ ಲಕ್ಷಣ. ಪಕ್ಷಪಾತ, ಪಕ್ಷಾಭಿಮಾನಿಗಳಿಗೆ ತಮ್ಮ ಗುಣ ಇನ್ನೊಬ್ಬರ ಅವಗುಣ ಮಾತ್ರ ಕಾಣುವವು. ಕುಂದುಕೊರತೆಯಿಲ್ಲದ ವಸ್ತು ವಿಲ್ಲ ಆದುದರಿಂದ ತನ್ನಲ್ಲಿ, ತನ್ನ ಪಕ್ಷದಲ್ಲಿ ಗುಣದೊಡನೆ ದೋಷಗಳು, ಕೊರತೆಗಳು ಯಾವುವು ಉಂಟೆಂಬುದನ್ನು ಅರಿತು ಹೇಳುವ ಸಮತ್ವ ಬುದ್ಧಿ ಯನ್ನು ಪಡೆದುಕೊಳ್ಳದ ವ್ಯಕ್ತಿ, ಸಮಾಜದ ಸಮತೂಕವನ್ನುಳಿಸಿಕೊಳ್ಳ ಲಾರದು. ಪಕ್ಷಾಭಿಮಾನದ ಆವೇಶದಿಂದ ಒಕ್ಕಣ್ಣಿಗಳಾದ ವ್ಯಕ್ತಿಗಳೇ ಬಹಳ.

ದೇಹವು ಜಡ. ಬುದ್ಧಿಯು ತರಲ. ಬುದ್ಧಿಯೊಡನೆ ಓಡಲು ದೇಹಕ್ಕೆ ಸಾಧ್ಯವೆ ? ಅನೇಕ ಬಾರಿ ಅನಿವಾರ್ಯದ ಹಲವು ಕಾರಣಗಳಿಗಾಗಿ ವ್ಯಕ್ತಿಯು ಕೆಲವೊಂದು ಪರಿಸ್ಥಿತಿಯಲ್ಲಿ ಸಿಕ್ಕುಬೀಳುತ್ತದೆ. ಸ್ವಲ್ಪ ಕಾಲಾವಧಿಯನಂತರ ಭ್ರಮನಿರಸನವಾಗಿ, ತಾನು ಬಂದು ಸೇರಿಕೊಂಡಿರುವ ಕೆಲಸ, ಪಕ್ಷ ಅಥವಾ ಮತ ಇಲ್ಲವೆ ಇಂತಹ ಇನ್ನೂ ಬೇರೆ ಸಂಗತಿಯಲ್ಲಿ ತೊಡಕಿಕೊಂಡಾಗ ಅಲ್ಲಿಂದ ಬಿಡುಗಡೆಹೊಂದಲು ಸಾಧ್ಯವಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ವ್ಯಕ್ತಿಯು ಏನು ಮಾಡುವುದಕ್ಕಾದೀತು ? ಭೀಷ್ಮಾ ಚಾರ್ಯರ ಚರಿತೆಯು ಇಲ್ಲಿ ಉತ್ತಮವಾದ ಮಾದರಿ. ಕೌರವ ಪಕ್ಷದಲ್ಲಿ

ಇರಬೇಕಾದುದು ಕ್ರಮಪ್ರಾಪ್ತವಾದ ಅನಿವಾರ್ಯ ಕರ್ಮವಾಗಿತ್ತು. ಆದರೂ ಅವರು ತಮ್ಮ ಬೌದ್ಧಿಕ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲಿಲ್ಲ. ಕ್ರಮ ಪ್ರಾಪ್ತವಾದ ಕರ್ತವ್ಯದಿಂದಲೂ ಹಿಂದೆಗೆಯಲಿಲ್ಲ. ಆ ಕರ್ತವ್ಯದಲ್ಲಿ ಪ್ರಾಯಶ್ಚಿತ್ತವೆಂದು ಮರಣವನ್ನೂ ಶಾಂತವಾಗಿ ಬರಮಾಡಿಕೊಂಡರು. ಅನ್ನದ ಋಣಕ್ಕಾಗಿ ಬುದ್ಧಿಯನ್ನು ಮಾರಿಕೊಂಡು, ಅದರ ಸ್ವಾತಂತ್ರ್ಯ ವನ್ನು ಕಳೆದುಕೊಂಡು, ಅಸತ್ಯವನ್ನು ಸತ್ಯವೆಂದು ಪ್ರತಿಪಾದಿಸುವ ಮಂಕುತನದಿಂದ ಆ ವ್ಯಕ್ತಿಯು ತನ್ನ ಹಾನಿಯನ್ನಲ್ಲದೆ ಸಮಾಜಕ್ಕೂ ಕೇಡನ್ನು ತರುವುದು. ಪ್ರಾಮಾಣಿಕವಾಗಿ ಅಂತರಾಳದಲ್ಲಿ ಎನಿಸಿದ್ದನ್ನು ಅವಶ್ಯವಿದ್ದಲ್ಲಿ ಆಡುವ ನೈತಿಕ ಧೈರ್ಯವನ್ನು ಕಳಕೊಂಡ ವ್ಯಕ್ತಿಯು, ಸಮಾಜದಲ್ಲಿ ಸುಳ್ಳುವಾತಾವರಣವು ಹಬ್ಬಿಕೊಂಡಿರಲು ನೆರವಾಗುವ ಪಾಪ ವನ್ನು ಮಾಡುತ್ತಿರುತ್ತದೆ

ಪ್ರಾಮಾಣಿಕವಾಗಿ ನಡೆಯುವ ಸಂಪೂರ್ಣ ಪ್ರಯತ್ನವಿದ್ದಾಗಲೂ ತತ್ವನಿಷ್ಠ ವ್ಯಕ್ತಿಯ ಜೀವನದಲ್ಲಿ ಅನಿವಾರ್ಯವಾದ ಒಂದು ವಿರೋಧಾ ಭಾಸವನ್ನು ಎದುರಿಸುವ ಹೊತ್ತು ಬಾರದೆ ಹೋಗದು ಜಗತ್ತು ಬರಿ ಸರಲ ಪಾತಳಿಯಲ್ಲ; ವೃತ್ತಾಕಾರ ಗೋಲಕ ಜೀವನ ಕ್ರಮದಲ್ಲೂ ದಾರಿ, ಜನರು ಎಣಿಸಿದಷ್ಟು ನೇರವಾಗಿಲ್ಲ ವರ್ತುಲಾಕಾರದಲ್ಲಿ ಸುತ್ತಿಸುತ್ತಿ ಕೊಂಡು ಹೊರಟಂತಿದೆ ಇದರಿಂದ ವಕ್ರವಲಯದಲ್ಲಿ ಪರಸ್ಪರ ಎರಡು ವಿಪರೀತ ದಿಕ್ಕಿನ ತುದಿಗಳು ಒಂದಕ್ಕೊಂದು ಸಮೀಪಿಸುತ್ತವೆ. ವ್ಯಕ್ತಿಗಳಿಗೆ ಸಂಕಟಕ್ಕೀಡುಮಾಡುತ್ತವೆ ! ಅಹಿಂಸೆಯೇ ಜೀವನದ ಪರಮಸಾಧನೆ ಎಂದರು ಗಾಂಧಿಜೀ ಅಹಿಂಸೆಯ ವಿಪರೀತ ಬಿಂದು ಯುದ್ಧ. ಕಾಶ್ಮೀರ ಯುದ್ಧ ಚಕ್ರ ಬಂತು ಶಸ್ತ್ರದಿಂದ ಎದುರಿಸಲು ತಮ್ಮ ಶಿಷ್ಯರಿಗೆ ಅನು ಮತಿಸಬೇಕಾಯ್ತು. ಬೇಡಿದ್ದನ್ನೀವ ದಾನಿ ಎಂದು ಬಿರಿದು ಹೊತ್ತ ಕರ್ಣ, ಹರಿಶ್ಚಂದ್ರರ ಕಥೆ ಸುಪ್ರಸಿದ್ಧವಿದೆ. ಕ್ಷತ್ರಕರ್ಮದಿಂದ ನಿವೃತ್ತನಾಗಿ ಬ್ರಹ್ಮಋಷಿಯಾದ ವಿಶ್ವಾಮಿತ್ರನಿಗೆ ರಾಮನನ್ನು ಕರೆದೊಯ್ದು ರಾಕ್ಷಸ ರನ್ನು ಸಂಹರಿಸಬೇಕಾಯ್ತು. ತತ್ವಜಿಜ್ಞಾಸುಗಳಾಗಿ ಸತ್ಯಸಾಕ್ಷಾತ್ಕಾರ ಕ್ಕಾಗಿ ಆಶ್ರಮಸ್ವೀಕರಿಸಿ ಏಕಾಂತದಲ್ಲಿ ನಿಂತವರ ಸೇವೆಗೆ ಹೆಣ್ಣು ಧಾವಿ ಸುವುದು, ವಿರಕ್ತ ಸಂಸಾರದ ಸೂತ್ರಧಾರೆಯಾಗುವುದು. ಇಂಗ್ಲೆಂಡಿನ

ಸಂಪ್ರದಾಯವಾದೀ ಚರ್ಚಿಲ್ ಪ್ರಭೃತಿಗಳಿಗೆ ರಸಿಯಾ ಎಂದರೆ ಆಗದು. ಆ ಚರ್ಚಿಲ್ಲನಿಗೇ ಸ್ಟಾಲಿನ್ನನೊಡನೆ ಕೂಡಿ ಕೆಲಸಮಾಡುವ ಹೊತ್ತು ಬಂತು. ಸಾಮ್ಯವಾದದ ಧ್ವಜವನ್ನೆತ್ತಿರುವ ಕೆಂಪು ಬಾವುಟದ ರಶಿಯಾ ಸುತ್ತಲಿನ ಸಣ್ಣಪುಟ್ಟ ರಾಷ್ಟ್ರಗಳನ್ನು ಬಾಹುಪಾಶದಲ್ಲಿರಿಸಿಕೊಂಡು ಸಾಮ್ರಾಜ್ಯವಾದಿಗಳಂತೆ ವರ್ತಿಸುವ ಪ್ರಸಂಗ ಬಂದಿದೆ. ಸಂಹಾರಕ ಶಸ್ತ್ರಾಸ್ತ್ರಗಳ ಸಂಶೋಧಕರಿಗೆ ಒಬ್ಬರಿಗೆ ೧೫೦೦೦, ಇನ್ನೊಬ್ಬರಿಗೆ ೨೦೦೦೦, ಇಂತಹ ಹಲವಾರು ಸುವರ್ಣನಾಣ್ಯಗಳ ಪಾರಿತೋಷಿಕದ ಆಮಿಷಗಳನ್ನು ಮುಂದೊಡ್ಡಬೇಕಾಗಿದೆ! ಆಮಿಷದಲ್ಲಿಯೂ ಸಮತೆಯಿಲ್ಲ ಸಮತೆಯ ಸ್ಥಾಪನೆಗೆ ವೈಷಮ್ಯ ದ್ವೇಷಾಸೂಯೆಗಳ ಪ್ರಚಾರ! ವರ್ಗಕಲಹಕ್ಕೆ ಉತ್ತೇಜನ! ಇಂತಿದು ಪ್ರತಿಜ್ಞೆಯ ತೀರ ವಿರುದ್ಧವಾಗಿ ನಡೆವ ಪರಿಸ್ಥಿತಿಯನ್ನು ಜೀವನಲ್ಲಿ ಒಂದು ಬಾರಿಯಾದರೂ ಅನುಭವಿಸಬೇಕಾಗದ ವ್ಯಕ್ತಿಯೆ ದೊರೆಯಲಿಕ್ಕಿಲ್ಲ. ಮೂಗಿನ ನೇರಕ್ಕೆ ನಡೆದರೆ ಕರ್ಣ-ಹರಿಶ್ಚಂದ್ರರ ಗತಿ ನಿಶ್ಚಿತ. ಏಕಮಾರ್ಗಿ ಎಗ್ಗರ ರೀತಿಯೆನಿಸುವುದು. ವೈಯಕ್ತಿಕ ಸ್ವಾರ್ಥಕ್ಕಾಗಿ ಅಲ್ಲ. ದೇವರಾಣೆ ಮಾಡಿ ಕೇವಲ ಸಾಮಾಜಿಕ ಕಲ್ಯಾಣಕ್ಕಾಗಿಯೇ ಸ್ವಲ್ಪಕಾಲ ಅನಿವಾರ್ಯವಾದ ವಿರೋಧಾಭಾಸದ ಈ ವಿಪರೀತ ಗತಿಯಲ್ಲಿ ಕ್ರಮಿಸುವ ಹೊತ್ತು ಬರುವುದು. ಈ ಸುಳಿಯೊಳಗಿಂದ ಹಾಯ್ದು ಪಾರಾಗಿ ಮತ್ತೆ ಸರಲ ಮಾರ್ಗಕ್ಕೆ ಬಂದು ಸೇರುವ ಯೋಗವು ಬಹಳ ಗಹನವೂ ಸೂಕ್ಷ್ಮವೂ ಆಗಿದೆ. ಜೀವನ ಸಂಗೀತದೊಳಗಿನ ಪರಮ ಕಷ್ಟದ ಕೆಲಸವಿದು. ವಿರುದ್ಧ ಸ್ವರಗಳ ಛಾಯೆಗಾಣಿಸಿ ಮೂಲತತ್ವಾನುಸಂಧಾನಕ್ಕೆ ಚ್ಯುತಿಯಿಲ್ಲದೆ ಹಾಡು ಮುಗಿಸುವುದು ಅಸಾಮಾನ್ಯ ಕೃತಿ. ಮಹಾಭಾರತದಲ್ಲಿ ಇಂತಹ ಸೂಕ್ಷ್ಮಧರ್ಮದ ಅನೇಕ ಪ್ರಸಂಗಗಳನ್ನು ಬಹಳ ಕುಶಲತೆಯಿಂದ ಚಿತ್ರಿಸಿದ್ದುಂಟು. ಸ್ವಾರ್ಥೀ ಲುಚ್ಚರು, ಕೀರಸ್ಥಾನಿಗಳೆಂಬ ಅಪವಾದಕ್ಕೆ ಆಸ್ಪದ ದೊರೆಯದಂತೆ ತನ್ನ ನಡೆವಳಿಯನ್ನು ಮೇಲುಮಟ್ಟದಲ್ಲಿ ಪವಿತ್ರವಾಗಿ ಉಳಿಸಿಕೊಂಬ ದಾರ್ಢ್ಯವಿಲ್ಲದವರು ಕಪಟನಾಟಕಿಗಳಾಗಿ ಸಮಾಜಕಂಟಕರೆನಿಸುವರು. ಪಶ್ಚಾತ್ತಾಪ ಪೂರ್ವಕವಾಗಿ ಅನುಸರಿಸಬೇಕಾದ ಅನಿವಾರ್ಯವಾದ ಗೌಣ ಮಾರ್ಗ. ಆದರೆ ಅನಿವಾರ್ಯವೆಂದು ನ್ಯಾಯ್ಯವಲ್ಲ. ಬಾಳಿನಲ್ಲಿ ಈ ಬಗೆಯ

ಕಾರಸ್ಥಾನಗಳೇ ಜೀವನದ ಯೋಜನೆಯ ಮಹತ್ವದ ಭಾಗವಾಗಿರುವ ವ್ಯಕ್ತಿಯು ಸಮಾಜದಲ್ಲಿ ಪ್ಲೇಗಿನ ಜಂತುವಿದ್ದಂತೆ; ಬಹಿಷ್ಕಾರಾರ್ಹ.

ಕುರುಡತನಕ್ಕಾಗಿಯೆ ದಿನಾಲು ನಾಲ್ಕು ದುಡ್ಡು ಸಿಕ್ಕುತ್ತಿರುವವರಿಗೆ ದೇವರು ಪ್ರತ್ಯಕ್ಷನಾಗಿ ನಿಮಗೆ ಪೂರ್ಣ ದೃಷ್ಟಿಯನ್ನು ಕೊಡುತ್ತೇನೆಂದು ವರವನ್ನು ನೀಡಹೋದರೆ, ಕುರುಡರಿಗೆ ಸಂತೋಷವಾದೀತೇ ? ದುಃಖ ವಾದೀತೇ ? ಕಣ್ಣು ಕಾಣಹತ್ತಿದರೆ ಈಗಿನಂತೆ ಕರುಣೆಯಿಂದ ಜನ ದುಡ್ಡು ಕೊಟ್ಟೀತೇ ! ಆದುದರಿಂದ. ಅವರು 'ಪರಮಾತ್ಮನೇ, ಕಣ್ಣುಕಾಣದಿರುವ ವರವನ್ನೇ ನೀಡು;' ಎಂದು ಪ್ರಾರ್ಥಿಸಿಕೊಳ್ಳುವುದೇ ಸಹಜವಷ್ಟೆ ? ಒಂದು ಬಗೆಯಾದ ವ್ಯಕ್ತಿತ್ವವನ್ನು ಪಡೆದುಕೊಂಡವರು, ಒಂದು ಪಕ್ಷ, ಮತ, ಅಥವಾ ಪಂಥದಲ್ಲಿ ಇಂಬನ್ನು ಹುಡುಕಿಕೊಂಡವರು ತಮ್ಮ ಇರುವಿನೊಳಗಿನ ಕುಂದುಕೊರತೆಗಳನ್ನು ಕಾಣುವ ಸಾಮರ್ಥ್ಯವನ್ನು ಹೇಗೆ ಮತ್ತು ಏಕೆ ಕಳೆದುಕೊಳ್ಳುವರೆಂಬುದು ಮೇಲಣ ದೃಷ್ಟಾಂತದಿಂದ ಬಹಳ ಚೆನ್ನಾಗಿ ತಿಳಿಯುವಂತಿದೆ ಮಾನವನಿಗೆ ಜ್ಞಾನವು ಪ್ರತ್ಯಕ್ಷವಾಗಲು ಸಿದ್ಧವಿದೆ. ಅರಿವು ಅನಂತವಾಗಿ ವಿಕಾಸಗೊಳ್ಳಲು ಆಸ್ಪದವಿದೆ. ಆದರೆ ಅದೆಲ್ಲವನ್ನು ಸ್ವೀಕರಿಸಿ ಅರಗಿಸಿಕೊಳ್ಳಲು ವ್ಯಕ್ತಿಗೆ ಆಗುವುದಿಲ್ಲ. ಜ್ಞಾನವು ಮಾನವ ರನ್ನು ಆವರಿಸಿಕೊಂಡಿದೆ. ಸುತ್ತುಮುತ್ತಲಿಂದ ಅದು ಒಳನುಗ್ಗಲು ಸಂಧಿ ಯನ್ನು ಹುಡುಕುತ್ತಿದೆ. ಆದರೆ ವ್ಯಕ್ತಿಯು ತನ್ನೊಳಗೆ ತನಗೆ ಅನವಶ್ಯಕ ವಾದ ಜ್ಞಾನವು ಪ್ರವೇಶಿಸದಂತೆ ತಡೆಗಳನ್ನು ಒಡ್ಡುತ್ತಾನೆ ಬದಿಯ ಬೆಳಕು ಒಳಗೆ ಬರದಂತೆ, ಟಾಂಗದ ಕುದುರೆಯ ಹಾಗೆ ಕಣ್ಣುಮುಚ್ಚಕಗಳನ್ನು ಧರಿಸುತ್ತಾನೆ.

ಇಂತಿವೆಲ್ಲ ಕಾರಣಗಳಿಂದ ಸಮಾಜದಲ್ಲಿ ಜ್ಞಾನಪ್ರಸಾರವು ಅಥವಾ ಅರಿವಿನ ವಿಕಾಸವು ಸಾಕಷ್ಟು ವೇಗವಾಗಿ ಬೇಗನೆ ಆಗುವುದಿಲ್ಲ. ಸಮಾಜ ಪರಿವರ್ತನ, ವಿಕಾಸವು ಅತ್ಯಂತ ಸಾವಕಾಶವಾಗಿ ಜರುಗುವುದು ಅನಿವಾರ್ಯ. ಆದುದರಿಂದ ಪರಿಪೂರ್ಣರು ಯಾರೂ ಇಲ್ಲ ತಮ್ಮ ತಮ್ಮ ಇತಿಮಿತಿಗಳ ಅರಿವನ್ನು ಜಾಗೃತವಾಗಿ ಉಳಿಸಿಕೊಳ್ಳುತ್ತಿರಬೇಕು. ಒಳಗಿನ ಅರಿವು ಜಾಗೃತವಾಗಿದ್ದಲ್ಲಿ, ಸಾಕ್ಷಿಯನ್ನು ಭ್ರಮಿಷ್ಟನನ್ನಾಗಿಸದಿದ್ದಲ್ಲಿ ಮಾತ್ರ ಇದು

ಸಾಧ್ಯ. ವ್ಯವಹಾರದೊಳಗಿನ ಪ್ರತಿಯೊಂದು ನಿರ್ಣಯದಲ್ಲಿಯೂ ತನ್ನ ಅಂತಃಸಾಕ್ಷಿಯ ನಿರ್ಣಯಕ್ಕೆ ಕಿವಿಗೊಡದೆ ಮುಂದಡಿಯಿಡಕೂಡದು. ತನ್ನ ಪರಿಸ್ಥಿತಿ, ಯೋಗ್ಯತೆಗಳು ತನಗೆ ಗೊತ್ತಿರುವಂತೆ ಬೇರೆಯವರಿಗೆ ಇರಲಾರವು. ಶಕ್ಯವಿದ್ದಷ್ಟು ಹೊರಗಿನ ಎಲ್ಲ ಸಲಹೆ ಸೂಚನೆಗಳನ್ನು ಪಡೆದುಕೊಳ್ಳುವುದು ಅವಶ್ಯ. ಆದರೆ ಕೊನೆಯ ನಿರ್ಣಯಾಧಿಕಾರ ತನ್ನ ಸಾಕ್ಷಿಪ್ರಭುವಿನದಲ್ಲದೆ ಬೇರೆ ಯಾರಿಗೂ ಇಲ್ಲ. ನಿರ್ಣಯವು ಕೆಲವು ಬಾರಿ ತಪ್ಪಬಹುದು. ತಪ್ಪಿದ್ದಕ್ಕೆ ಆಗತಕ್ಕ ಶಿಕ್ಷೆಗೆ ತಲೆವಾಗುವ ಮಾನಸಿಕ ಸಿದ್ಧತೆಯಿರಬೇಕು. ಅನುಭವಿಸಬೇಕು. ಈ ಕ್ರಮದಲ್ಲಿ ಸಾಗುವಾತನಿಗೆ ಸರಿಯಾದ ನಿರ್ಣಯಶಕ್ತಿಯು ಸ್ವಾಭಾವಿಕವಾಗಿ ತಾನೇ ಬರುವುದು. ಆದುದರಿಂದ ಯಾವ ಪ್ರಸಂಗದಲ್ಲಿಯೇ ಆಗಲಿ, ಯಾವ ಕಾರಣಕ್ಕೆ ಆಗಲಿ, ಅಂತಃಸಾಕ್ಷಿಯನ್ನು ಮೂಲೆಗುಂಪಾಗಿಸಕೂಡದು. ಅದರ ಟೀಕೆಗೆ ಹೆದರಿ ಗಾಬರಿಗೊಂಡು ಅದರ ಬಾಯಿ ಮುಚ್ಚಿಸಕೂಡದು. ಓಡಿಹೋಗಿ ಸಂತೆಯ ಗಲಾಟೆಗಳಲ್ಲಿ, ಸೀನೆಮಾ ರೇಡಿಯೋಗಳ ಕೂಗಾಟದಲ್ಲಿ ಅಥವಾ ಉನ್ಮಾದಕ ಅವಸ್ಥೆಯನ್ನು ತಂದುಕೊಂಡು ಅಲ್ಲಿ ಮನಸ್ಸನ್ನು ತೊಡಗಿಸಿ ಒಳಗಿನ ಟೀಕೆಯನ್ನು ತಪ್ಪಿಸಿಕೊಳ್ಳುವುದು ಹೇಡಿತನ. ಅಂತಹ ಸಂದರ್ಭದಲ್ಲಿ ಸ್ವ-ಸ್ಥವಾಗಿದ್ದುಕೊಂಡು ಎಲ್ಲ ಟೀಕೆಯನ್ನು ಕೇಳಿಕೊಂಡು ಅದರಿಂದ ಕಲಿಯಬೇಕಾದ ಪಾಠವನ್ನು ಅವಶ್ಯವಾಗಿ ಗ್ರಹಿಸಬೇಕು.

ವ್ಯಕ್ತಿಗೆ ಸರಿಹೋಗುವ ಈ ಮಾತು ಸಮಾಜಕ್ಕೂ ಸಲ್ಲುವುದು. ಅಂತಃಸಾಕ್ಷಿಯನ್ನು ಕೊಂದುಕೊಂಡ ಅರ್ಧಾಂಗರು ಮುಂದುಗಾಣದೆ ಸರ್ವಾಧಿಕಾರಿಯಂತಹ ಯಾವುದೊಂದು ಹೊರಗಿನ ವಸ್ತುವಿಗೆ ನೇಕುಬಿದ್ದು ಹಿಂಡಿನೊಳಗಿನ ಕುರಿಗಳಂತಾಗಿ ಬಾಳಲು ಒಪ್ಪಿಕೊಳ್ಳುವ ಹೊತ್ತು ಬರುತ್ತದೆ. ಒಳಗಿನ ವಿಮರ್ಶಕಶಕ್ತಿಯನ್ನು ಜೀವಂತವಾಗಿ ಉಳಿಸಿಕೊಂಡರೆ ಇಂತಹ ಪ್ರಸಂಗವು ಬರುವುದಿಲ್ಲ. ಒಳಗಿನ ವಿಮರ್ಶಕ ಶಕ್ತಿಗೆ ಹೊರಗಿನ ಆಗುಹೋಗುಗಳ ನೆರವನ್ನು ಒದಗಿಸಿಕೊಡಬೇಕು. ಅದ್ಯಯಾವತ್ ವಿಚಾರಗಳನ್ನೂ ಶಕ್ಯವಿದ್ದ ಪ್ರಯತ್ನಪೂರ್ವಕವಾಗಿ ಅರಿತುಕೊಳ್ಳಬೇಕು. ಇದರಿಂದ ಸ್ವತಂತ್ರ ವಿಚಾರ ಶಕ್ತಿಯು ಪುಟಗೊಳ್ಳುತ್ತದೆ. ಎದುರು ಪಕ್ಷವು ಇಲ್ಲೆಂದು ಗ್ರಹಿಸುವುದು ವ್ಯಕ್ತಿಯ ಪುಕ್ಕತನದ ದ್ಯೋತಕ. ಎದುರುಪಕ್ಷದ ಆಕ್ಷೇಪಣೆಗಳಿಗೆ ಬೆಲೆಯಿಲ್ಲವೆಂದು ಬಗೆದರೆ, ಅದು ಲೋಕದೊಳಗಿನ ಚೈತನ್ಯ

ಶಕ್ತಿಯ ಅನಾದರ. ಇದು ಎಂದಿಗೂ ಕೂಡದು. ಇನ್ನೊಂದು ಪಕ್ಷದ ಆಕ್ಷೇಪಗಳನ್ನು ಲೆಕ್ಕಕ್ಕೆ ಹಿಡಿದು ತನ್ನ ವಿಚಾರಗಳನ್ನು ದೃಢಪಡಿಸಿಕೊಳ್ಳ ಬೇಕು. ಆಕ್ಷೇಪಗಳಿಗೆ ಸಕಾರಣವಾದ ಸಮಂಜಸ ಉತ್ತರವು ತನ್ನಲ್ಲಿ ಇಲ್ಲದಿದ್ದರೆ ತನ್ನ ವಿಚಾರದ ಆ ಭಾಗವು ಭದ್ರವಲ್ಲವೆಂದು ನಿಶ್ಚಯಿಸಿ ಅದನ್ನು ತಿದ್ದಿಕೊಳ್ಳುವ ಶಾಂತಪ್ರಯತ್ನಗಳು ನಡೆಯಬೇಕು. ಇದಕ್ಕೆ ಪ್ರತಿಯಾಗಿ ಆಗ್ರಹಿಯಾಗಿ ಸಿಡುಕಿನ ಸ್ವಭಾವವು ತಲೆ ಎತ್ತಿದ್ದರೆ, ಅದು ಶಾರೀರಿಕ ಹಾಗು ಮಾನಸಿಕ ಅಶಕ್ತತನದ ಲಕ್ಷಣ ಇಂತು ಮನಃಸಾಕ್ಷಿಯಾಗಿ ತನಗೆ ಒಪ್ಪಿಗೆಯಾಗದಿದ್ದುದನ್ನು ಹಣಕ್ಕಾಗಿ ಅಥವಾ ಲೋಕ ರಂಜನೆಗಾಗಿ ಆಡುವುದೂ ಮಾಡುವುದೂ ಮೋಸ.

ವಿಮರ್ಶೆಯ ಬಗೆಯು ತಿಳಿಯದ್ದಕ್ಕೆ ವ್ಯಕ್ತಿಯ ವಿಕಾಸಕ್ಕೆ ಹಿರಿದಾದ ತಡೆಯುಂಟಾಗುತ್ತದೆ ಬೈಯ್ಗಳು, ಸಿಡುಕಿನ ನುಡಿ, ಅಥವಾ ಮುಮ್ಮಲನೆ ಮರಗುವುದು ಇದೆಲ್ಲ ವಿಮರ್ಶೆಯಲ್ಲ ವಿಚಾರವಿನಿಮಯದಲ್ಲಾಗಲಿ, ಆತ್ಮವಿಚಾರದಲ್ಲಾಗಲಿ ಬೇಕಿನ ಮಾತಿರಬೇಕಲ್ಲದೆ ಬೆಂಕಿಯ ಮಾತಿನಿಂದ ಬರಿ ಮನಸ್ತಾಪವು ಮಾತ್ರ ಆಗುವುದು ಒಳಗಣ ನೋವಿಗೆ ಹಣೆಹಣೆ ಬಡಿದುಕೊಂಬುದು ಅಥವಾ ಆರ್ಭಟೆಯನ್ನು ಪ್ರದರ್ಶಿಸುವುದು ಪ್ರಾಥಮಿಕ ಸ್ಥಿತಿಯ ಕುರುಹು. ಸಾಮಾಜಿಕ ಟೀಕೆಯಲ್ಲೂ ಇದು ನಿಜ. ಮಾತಿನ ಮಥನದಿಂದ ಬರಿ ವಾದಕ್ಕಿಂತ ಬೆಳಕಿನ ಹೊಸ ವಿಚಾರವು ಉದಿಸಬೇಕು. ವಿಚಾರಕ್ಕೆ ಪ್ರತಿ ವಿಚಾರವನ್ನು ಹೇಳಬೇಕಾದಲ್ಲಿ ಕೆಲರು ಉಪಹಾಸದ ಸಾಧನವನ್ನು ಉಪಯೋಗಿಸುವರು. ಇದು ಅಪ್ರಶಸ್ತ. ಆದರೆ ಹಾಸ್ಯಕ್ಕೂ ನಿಶ್ಚಿತವಾದ ಒಂದು ಸ್ಥಾನವಿದೆ ತನ್ನ ಎಗ್ಗತನ, ತನ್ನ ಕೊರತೆಯನ್ನು ಕಂಡು ತಾನೇ ನಗಲಿಕ್ಕೆ ಆಗದವನು ಅಸಂಸ್ಕೃತನು, ಅರಸಿಕನು. ಇನ್ನೊಬ್ಬರಿಗೆ ನಗುವುದಕ್ಕೆ ಸಂಸ್ಕೃತಿ ಬೇಡ. ಅದು ಕುಹಕತನದ ಲಕ್ಷಣವೂ ಆಗಬಲ್ಲುದು. ಆದರೆ ಇನ್ನೊಬ್ಬರೊಡನೆ ನಕ್ಕು ನಗಿಸಲು ಬರುವುದು ಮಿಗಿಲಾದ ಗುಣ. ವಿನೋದೀ ವಿಚಾರದ ಗಣ್ಯವಾದ ರಾಷ್ಟ್ರೀಯ ಪ್ರಮುಖ ಪತ್ರಿಕೆಯು ಇಲ್ಲದಿರುವ ಸಮಾಜಕ್ಕೆ ಆತ್ಮವಿಮರ್ಶಾಸಾಮರ್ಥ್ಯವು ಇನ್ನೂ ಬಾರದಿರುವ ಲಕ್ಷಣ. ಆ ಸಮಾಜವು

ಪ್ರಾಥಮಿಕ ಸ್ಥಿತಿಯಲ್ಲಿಯೆ ಇದೆಯೆಂದು ತಿಳಿಯಬೇಕು. ಸಾಮಾನ್ಯ ವ್ಯಕ್ತಿಗಳ ಮಾತು ಆ ಸಮಾಜದ ಸಾಂಸ್ಕೃತಿಕ ತರಗತಿಯನ್ನು ವ್ಯಕ್ತಪಡಿಸುತ್ತದೆ. ಮಾತುಮಾತಿಗೆ ಬೈಗಳು, ಆಣೆ, ಶಾಪ, ಅಕ್ಕಸವು ಕಾಣಿಸಿಕೊಳ್ಳುವುದು ಅನಾಗರಿಕತೆಯ ಲಕ್ಷಣ. ಉಡುಪು ತೊಡಪು ಹೇಗೆ ವ್ಯಕ್ತಿಯ ಅಂತರಂಗದ ಬಾಹ್ಯ ಪ್ರದರ್ಶನವೆನ್ನಬಹುದೊ ಹಾಗೆಯೇ ಮಾತು, ಶೈಲಿ, ಭಾಷೆಯ ವಿಸ್ತಾರ, ಕಲಾ-ಸಾಹಿತ್ಯದ ಮಟ್ಟ ಮತ್ತು ಶೈಲಿಗಳು ಆಯಾ ಸಮಾಜದ ಅಂತರಂಗದ ಬಾಹ್ಯಪ್ರತೀಕ.

ವ್ಯಕ್ತಿಗೂ ಸಮಾಜಕ್ಕೂ ಇಂತು ಅಭೇದ ಸಂಬಂಧವಿದೆ. ಸಮಾಜವು ಜ್ಞಾನಸ್ವರೂಪದಲ್ಲಿ ಸೂಕ್ಷ್ಮರೂಪದಿಂದ ವ್ಯಕ್ತಿಯ ಚೈತನ್ಯದಲ್ಲಿ ಇಂಬುಗೊಂಡು ಅವಲ ಅಂತಃಸಾಕ್ಷಿಯಾಗುತ್ತದೆ. ಹೀಗೆ ವ್ಯಕ್ತಿಯು ಸಮಾಜವನ್ನೂ ಸಮಾಜವು ವ್ಯಕ್ತಿಯನ್ನೂ ಧಾರಣಮಾಡುತ್ತವೆ. ಒಂದರೊಂದರ ವಿಕಾಸಕ್ಕೆ ಕಾರಣವಾಗಿರುತ್ತವೆ. ಆದಕಾರಣ ಎರಡೂ ಅಪೂರ್ಣವೆಂದು ಒಪ್ಪಿಕೊಂಡಂತೆಯೆ ಸರಿ. ಇನ್ನೂ ವಿಕಾಸವಾಗುತ್ತಲೆ ಇರುವುದು ಪರಿಪೂರ್ಣವಾಗಿರಲಾರದು. ಪೂರ್ಣತೆಯೆನಿಸುತ್ತಿದ್ದರೆ ಅದು ಕೇವಲ ಸಾಪೇಕ್ಷ; ನಿರಪೇಕ್ಷ ಪೂರ್ಣತೆಯಲ್ಲ. ಆದಕಾರಣ ವ್ಯಕ್ತಿಮತ್ತು ಸಮಾಜಗಳಿಗಿಂತ ಹಿರಿದಾದ, ಮಿಗಿಲಾದ, ಸ್ವಯಂಪೂರ್ಣವಾದ-ನಿರಪೇಕ್ಷ, ನಿರಂತರ ಅನಂತವಾದ ಒಂದನ್ನು ದೃಢವಾಗಿ ನೆರೆನೆಮ್ಮದೆ ವ್ಯಕ್ತಿ ಅಥವಾ ಸಮಾಜವು ಪೂರ್ಣವಾಗಿ ವಿಕಾಸಗೊಳ್ಳಬೇಕೆಂಬ ಆಶೆಗೆ ಆಧಾರವೇ ಉಳಿಯುವುದಿಲ್ಲ. ಬರಿ ಸಮಾಜಸೇವೆ, ಮಾನವ್ಯಸೇವೆ ಎಂಬ ಸೊಲ್ಲು ಅರ್ಥವಿಹೀನ. ಕುರುಡರು ಕುರುಡರಿಗೆ ದಾರಿತೋರಬಲ್ಲರೆ ?

ವ್ಯಕ್ತಿಗೆ ಆತನ ಅರಿವು ಆಧಾರ; ಈ ಅರಿವಿಗೆ ಸಮಾಜವು ಆಶ್ರಯ; ಸಮಾಜಕ್ಕೆ ಅನಂತ-ಗುಣ-ಪೂರ್ಣ-ಸ್ವಯಂಜ್ಯೋತಿ ಆದರ್ಶ. ಬಾಹ್ಯ ಪರಿಸ್ಥಿತಿ, ಸ್ವಾರ್ಥಭಾವ ಇವುಗಳಲ್ಲಿಯೆ ನೀತಿಯ ಉದಯ, ಸೌಂದರ್ಯದ ಉಗಮವೆಂದು ಬಗೆದರೆ ನಿರಪೇಕ್ಷ ಪ್ರೇಮ, ಶುದ್ಧ ಪರೋಪಕಾರಾದಿ ಭಾವನೆಗಳಿಗೆ ಅಸ್ತಿತ್ವವೇ ಇಲ್ಲ. ಬರ್‌ಟರಾಂಡ ರಸೆಲ್ಲನಿಗೆ ಅನಂತ ಗುಣಪೂರ್ಣಶಕ್ತಿಯ ಸ್ವತಂತ್ರ ಅಸ್ತಿತ್ವವು ಮಾನ್ಯವಿಲ್ಲವಾದರೂ

ಫ್ರಾಯಿಡನ ಕಾಮಸಿದ್ಧಾಂತವು ಸಂಪೂರ್ಣ ಒಪ್ಪಿಗೆಯಿಲ್ಲ. ಮಾತ್ರ ಪ್ರೇಮದಂತಹ ಕೆಲವು ಗುಣಗಳ ಅಗವ್ಯಾತೆಯು ಆತನಿಗೂ ಮಾನ್ಯವಿದೆ. ಇವು ಕೇವಲ ಲೈಂಗಿಕ ಪ್ರವೃತ್ತಿಯೆಂಬುದು ಅತಿವಾದವೆಂದು ಆತನ ಮತವಿದೆ. ಪ್ರೇಮವನ್ನು ಆ ಕೋಟಿಯಲ್ಲಿ ಆತನು ಎಣಿಸಿದ್ದಾನೆ. Nietzsche despises universal love; I feel the motive power to all that desire as regards the world ಎಂದು ಪ್ರೀತಿಯೆ ಎಲ್ಲಕ್ಕೂ ಮೂಲವೆಂದು ರಸೆಲ್ಲನ ಅಭಿಪ್ರಾಯವಿದೆ ಅರಿವು ವಿಶ್ವಪ್ರೇಮದಲ್ಲಿ ಪರಿಣಾಮಗೊಳ್ಳುವುದರಲ್ಲಿಯೆ ಜೀವಿತದ ಸಾರ್ಥಕ್ಯವಿದೆ ಆದರೆ ವ್ಯಕ್ತಿ ಮತ್ತು ಸಮಾಜಗಳು ಒಂದರೊಂದರ ಆಶ್ರಯದಲ್ಲಿ ಪ್ರೇಮಬಂಧನದಿಂದ ಬದ್ಧವಾಗಿ ಸತತ ಅರಳುತ್ತಲಿವೆಯೆಂಬುದಕ್ಕೆ ಸ್ವಯಂಪೂರ್ಣವಾದ ಅನಂತಶಕ್ತಿಯೊಂದನ್ನು ಲೆಕ್ಕಿಸುವುದು ಅನಿವಾರ್ಯವಾಗುವುದಿಲ್ಲವೇ ?

ಮಾನವನ ಎಲ್ಲ ಶಕ್ತಿಯ ಕೇಂದ್ರ ಸಮಾಜ. ಸಮಾಜದ ಎಲ್ಲ ಸಾಮರ್ಥ್ಯದ ಉಗಮವು ಅನಂತ-ಗುಣ-ಪೂರ್ಣ-ಸ್ವಯಂಪ್ರಕಾಶ. ವ್ಯಕ್ತಿಯ ಮಟ್ಟಿಗೇ ವಿಚಾರಿಸುವಾಗ ಮಾಡಿದ ಪೃಥಕ್ಕರಣದಿಂದ ಮುಗಿಲಿನತ್ತ ಹಬ್ಬುವ ಒಂದು ಬಿಂದು, ನೆಲದತ್ತ ಪಸರಿಸುವ ಇನ್ನೊಂದು ಬಿಂದುವು ನಮಗೆ ಗೋಚರವಾಗಿದ್ದುವು. ಈಗ ಮೇಲಿನಿಂದ ಕೆಳಗಡೆಗೆ ಚಿಗಿವ ಮರದಂತೆ ಒಂದು ಚಿತ್ರವು ಕಣ್ಣೆದುರು ನಿಲ್ಲುವುದು. ಎಲ್ಲ ಶಕ್ತಿಯ ಆಗರ ಸ್ವಯಂಪ್ರಕಾಶ. ಅಲ್ಲಿಂದ ಸಮಾಜ-ಚತುರ್ಮುಖ, ಬಳಿಕ ವ್ಯಕ್ತಿಚೇತನ. 'ಊರ್ಧ್ವಮೂಲಂ ಅಧಃಶಾಖಂ ಅಶ್ವತ್ಥಂ ಪ್ರಾಹುಃ ಅವ್ಯಯಮ್' ಎಂದು ಗೀತೆಯು ವರ್ಣಿಸಿದ ಮುಗಿಲತ್ತಣಿಂದ ನೆಲದ ಕಡೆಗೆ ಚಿಗಿವ ಶಾಶ್ವತ ವೃಕ್ಷವಿದು.

ಪ್ರಾಣಿಗಳಲ್ಲಿರುವ ದೇಹಿಯು ಮಾನವ ವ್ಯಕ್ತಿಯಲ್ಲಿ ಕ್ಷೇತ್ರಜ್ಞನೆನಿಸುವುದು. ಗೀತೆಯಲ್ಲಿ ದೇಹಿ ಮತ್ತು ಕ್ಷೇತ್ರಜ್ಞನೆಂಬ ಎರಡೂ ಪಾರಿಭಾಷಿಕ ಪದಗಳು ಬಂದಿವೆ. ಆದರೆ ಅವುಗಳ ಅರ್ಥದಲ್ಲಿರುವ ಸೂಕ್ಷ್ಮಭೇದವನ್ನು ಗಮನಿಸಿ ವಿವರಿಸಿದ್ದು ಕಂಡು ಬರುವದಿಲ್ಲ ದೇಹಿಯು ಅರಿವಿನಿಂದೊಡಗೂಡಿದಾಗ ಕ್ಷೇತ್ರಜ್ಞನೆಂಬ ಹೆಸರಿಗೆ ಅರ್ಹ, ಆದಕಾರಣ ಮಾನವ

ಪ್ರವೇಶಿಸಿ, ದಶರಥನ ಸಮೀಪದಲ್ಲಿ ನಿಂತನು ಆಗಲೂ ಈತನಿಗೆ ಆ ದಶರಥನು ಅನುಭವಿಸುತಿದ್ದ ದುರವಸ್ಥೆಯು ತಿಳಿಯಲಿಲ್ಲ. ಸಂತೋಷದಿಂದ ಆತನನ್ನು ಸ್ತೋತ್ರಮಾಡುವುದಕ್ಕಾಗಿ, ಎಂದಿನಂತೆ ಪ್ರಾತಃಕಾಲದಲ್ಲಿ ತಾನು ಹೇಳಬೇಕಾದ ಮಂಗಳಾಶಾಸನಗಳನ್ನುಪಕ್ರಮಿಸಿದನು. ವಿನಯದಿಂದ ಕೈಮುಗಿದು "ಎಲೆ ಮಹಾತ್ಮನೆ! * ಸೂರ್ಯೋದಯಕಾಲದಲ್ಲಿ ಸಮುದ್ರನು ಒಂದು ತೇಜೋವಿಶೇಷವನ್ನು ಹೊಂದಿ ಉಕ್ಕಿಬರುವಂತೆ, ನೀನೂ ಸಂತುಷ್ಟಹೃದಯನಾಗಿ ಆನಂದಿಸು! ಇಂದ್ರನನ್ನು, ಸಾರಥಿಯಾದ ಮಾತಲಿಯು, ಹೀಗೆ ಉದಯಕಾಲದಲ್ಲಿ ಸ್ತೋತ್ರಮಾಡುತಲಿದ್ದುದರಿಂದಲೇ, ಆ ಇಂದ್ರನು ತನ್ನ ವೈರಿಗಳಾದ ದೈತ್ಯರೆಲ್ಲರನ್ನೂ ಜಯಿಸಿದನು. ಅದರಂತೆ ನಾನೂ ಈಗ ನಿನ್ನ ಶ್ರೇಯಃಪ್ರಾರ್ಥನೆಮಾಡುವೆನು. † ಸ್ವತಸ್ಸಿದ್ಧನಾಗಿ, ಸರ್ವವಿಭುವಾಗಿರುವ ಪರಬ್ರಹ್ಮನನ್ನು, ಶಿಕ್ಷೆ ಮೊದಲಾದ ಆರು ಅಂಗಗಳೊಡಗೂಡಿ ವೇದಗಳೂ, ಮೀಮಾಂಸಾದಿವಿದ್ಯೆಗಳೂ, ಸೃಷ್ಟಿಕಾರ್ಯಕ್ಕಾಗಿ ಇದೇಕಾಲದಲ್ಲಿ ಉದ್ಬೋಧಿಸುವಂತೆ, ನಾನೂ ಈಗ ನಿನ್ನನ್ನು ಎಚ್ಚರಗೊಳಿಸುವೆನು. ಸೂರ್ಯನು ಚಂದ್ರನೊಡಗೂಡಿ ಸಮಸ್ತಭೂತಗಳಿಗೂ ಆಶ್ರಯವಾದ ಈ ಭೂಮಿಯನ್ನು ಎಚ್ಚರಗೊಳಿಸುವಂತೆ,ಈಗ ನಾನೂ ನಿನ್ನನ್ನು ಎಚ್ಚರಗೊಳಿಸುವೆನು. ಎಲೆ ಮಹಾರಾಜನೆ ಏಳು ! ಮುಂದೆ ನಡೆಯಬೇಕಾದ ಮಹೋತ್ಸವಕ್ಕೆ ತಕ್ಕಂತೆ ಮಂಗಳಾಲಂಕಾರಗಳನ್ನು ಮಾ

* ಸೂರ್ಯೋದಯದಲ್ಲಿಯೂ ಸಮುದ್ರವು ಉಕ್ಕಿಬರುವುದುಂಟು. ಅಥವಾ ಮೂಲದಲ್ಲಿರುವ ಭಾಸ್ಕರಶಬ್ದಕ್ಕೆ ಚಂದ್ರನೆಂದೇ ಅರ್ಥವನ್ನು ಹೇಳಬಹುದು.

† "ನಾಮ ರೂಪಂಚ ಭೂತಾನಾಂ ಕೃತ್ಯಾನಾಂಚ ಪ್ರಪಂಚನಂ । ವೇದಶಬ್ದೇಭ್ಯ ಏವಾದೌ ದೇವಾದೀನಾಂ ಚಕಾರ ಸಃ" ಎಂದರೆ, ಬ್ರಹ್ಮನು ದೇವತೆಗಳೇ ಮೊದಲಾದ ಪ್ರಾಣಿಗಳಿಗೆಲ್ಲಾ, ನಾಮ, ರೂಪ, ಕೃತ್ಯ ಮೊದಲಾದುವುಗಳನ್ನು ವಿಸ್ತಾರವಾಗಿ ನಿರೂಪಿಸುವುದಕ್ಕಾಗಿ, ಮೊದಲು ವೇದಗಳನ್ನೇ ಮೂಲವಾಗಿಟ್ಟುಕೊಂಡನೆಂದರ್ಥವು. ಅಥವಾ ಸೃಷ್ಟಿಗೆ ಬೇಕಾದ ಅರ್ಥಗಳನ್ನು ವೇದಗಳಿಂದಲೇ ತಿಳಿದು ಮಾಡುವನೆಂದೂ ಗ್ರಹಿಸಬಹುದು. "ವೇದೇಭ್ಯಏವ ಭೂಮ್ಯಾದೀನ್ ಜ್ಞಾತ್ವಾ ವೇಧಾಸ್ಸೃಜತಿ"ಬ್ರಹ್ಮನು ವೇದಗಳಿಂದಲೇ ಭೂಮ್ಯಾದಿಪದಾರ್ಥಗಳನ್ನು ತಿಳಿದು, ಅವುಗಳನ್ನು ಸೃಷ್ಟಿಸುವನು. ಎಂದರೆ ಭೂಮ್ಯಾದಿಸೃಷ್ಟಿಕ್ರಮವನ್ನು ವೇದಗಳೇ ಬ್ರಹ್ಮನಿಗೆ ಬೋಧಿಸುವುವೆಂದು ಶ್ರುತಿಯು,

ಅಲ್ಲಮಪ್ರಭುವಿನ ತೇಜಸ್ವೀ ಭಾಷೆಯಲ್ಲಿ ಹೇಳುವುದಾದರೆ (ಜನ) ‘ತಮ್ಮ ತಾವು ಕೆಟ್ಟ ಕೇಡಿಂಗೆ ಬೆರಗಾದೆ ! ಮಿಥ್ಯವನೆ ಹಿಡಿದು ಮಿಥ್ಯವನೆ ಪೂಜಿಸಿ ಮರ್ತ್ಯಲೋಕದ ಭಕ್ತರೆಲ್ಲರು ವ್ಯರ್ಥವಾದರಲಾ !’ ‘ಕಣ್ಣು ಕಳೆದುಕೊಂಡು ಹೊಟ್ಟೆಸೀಳಿ ಮಗನ ಬಾಣಸವಮಾಡಿ ಕೈಲಾಸಪುರಕೆ ಹೋದವರೆಲ್ಲ ಭಕ್ತರೆ !........ಅಸುರ ಕರ್ಮಿಗಳು !........ನರಲೋಕದ ನರಗುರಿಗಳೆಲ್ಲ ಅಸುರ ಸಂಸಾರಕ್ಕೊಳಗಾದವರು !’ ವ್ಯಕ್ತಿಗಳು ‘ಸಕಲ-ಜೀವ-ಸ್ನೇಹ’ ಭಾವದವರಾಗಿ (ಅವತರಣದೊಳಗಿನ ಪದಗಳು ಚಾಮರಸನವು) ಸಮಾಜದ ಮುಖಾಂತರವಾಗಿ ತಮ್ಮ ಪ್ರೀತಿಯ ತ್ಯಾಗ, ಸೇವೆಗಳ ಮೂಲಕ ಅನಂತನ ಉಪಾಸನೆ ಮಾಡಿ ಜೀವನದಲ್ಲಿ ಕೃತಾರ್ಥರಾಗುವುದೆ ಶ್ರೇಯೋಮಾರ್ಗ.

---

# ಮಿಂಚಿನಬಳ್ಳಿಯ ಯೋಜನೆಗೆ ಸಹಾಯ ನೀಡಿದ ಮಹನೀಯರು

( ಈ ಮೊದಲು ಪ್ರಸಿದ್ಧಿಸಿದ ಪತ್ರಿಕೆಯಿಂದ ಮುಂದುವರಿದುದು )

| | | ರೂ. |
|---|---|---|
| ಶ್ರೀ. | ದ. ರಾ ಬೇಂದ್ರೆ (ವಚನ) | ೧೦೦ |
| ,, | ರುಕ್ಮಾಂಗದರಾವ ದೇಶಪಾಂಡೆ ,, | ೧೦೦ |
| ,, | ಭೀಮಸೇನಾಚಾರ್ಯ ಗೋಪಾಳಾಚಾರ್ಯ ,, ಕಾಖಂಡಿಕಿ | ೫೦ |
| ,, | ವಾಸುದೇವಾಚಾರ್ಯ ಹಯಗ್ರೀವಾಚಾರ್ಯ ,, ಕಡಿವಾಲ | ೨೫ |
| ,, | ಮಲ್ಹಾರರಾವ ರಾಮರಾವ ನಾಡಿಗೇರ ,, ರಾಣೇಬೆನ್ನೂರ | ೨೫ |